೭. (ಆಲಂ) ಬೇಸರದಿಂದ ಗೀಚು : ಇಂದು ಬರೆಯುವುದಕ್ಕೆ ವಿಷಯ ಏನೂ ಇಲ್ಲ. ಬರೆಯದೆ ಇದ್ದರೆ ತಪ್ಪು ಹೊರಬೇಕಾದೀತೆಂದು ಕೊರೆಯುತ್ತಿದ್ದೇನೆ (ಸುವಸಂ. ೧೬). ೮. (ಆಲಂ) ಬೇಸರ ಬರುವಂತೆ ಒಂದೇ ಸಮನೆ ಮಾತನಾಡು : ಶಾಸ್ತ್ರಿಗಳು ಮಂಗಳಗೀತೆಯನ್ನು ಹಾಡುವ ಬದಲು ಅಶುಭ ಮಂತ್ರಗಳನ್ನು ಕೊರೆಯಬೇಕಾಯಿತು (ರೂಢಿ).

[ದೇ. ‖ ತಮಿ. ಕುಱೈ; ಮಲ. ಕುಱೆ; ಕುಇ. ಕ್ರಾಸ]

**ಕೊಱೆ$_2$**, ಕೊಱು (ಕ್ರಿ). ಸುತ್ತು; ತಿರುಗು; ಭ್ರಮಿಸು: "ಕೊಱೆದುದು – ಗರವಟಿಸಿದುವುದು" (ಶಮದ. ೫೦. ೨). **ಕೊಱು** : "ಕೊ[ಪಾಠಾಂ. ಹೊ] ಱು [ಪಾಠಾಂ. ಱೆ]ದುದೆನೆ ಗರವರಿಸಿದರ್ಥಮಕ್ಕು" (ಶಬ್ದಸ್ಮೃ. ೯೦). [?]

**ಕೊಱೆ$_3$**, ಕೊರೆ$_3$ (ನಾ). ೧. ಕಮ್ಮಿಯಾದುದು; ಕಡಮೆಯಾದುದು. ೨. ಕೊರತೆಯಾದುದು; ನ್ಯೂನತೆ: ಬಂದರೊಳ್ಕೊಱೆಯಿಲ್ಲದ ಹೆಂಗಳಿರ್ದರು ಕಂದರ್ಪನೊಡ್ಡೋಲಗದಿ (ಮೋಹತ. ೫-೪೨). ೩. ಉಳಿದುದು; ಮಿಕ್ಕುದು; ಬಾಕಿ : (ಕ). **ಕೊರೆ$_3$**: ೨. ಕೊರೆಗಳಂ ತಿದ್ದಿ (ಸೌಗಂಧಿ. ೧೮೬-೧೧); ಅಳವಿನುಂ ತಿಳಿವಿನುಂ ಕೊರೆಯನಾಂ ನಲ್ಲೆಯಂ ಕಾಣದಳವಳಿದನೆನೆ ಕೇಳ್ವುದೇನಂ (ಸೌನಂದ. ೭-೪೬); ಕೊರೆಯಾವುದಾವೂರ ಸಿರಿಗೆ (ಇಂಚಾಪ. ೭-೨೬).

**ಕೊಱೆ$_4$**, ಕೊರೆ$_4$ (ನಾ). ೧. ಕತ್ತರಿಸುವುದು; ತುಂಡುಮಾಡುವುದು : (ಕ). ೨. ತುಂಡು; ಚೂರು: (ಕ). **ಕೊರೆ$_4$**: ೨. ಆ ಕೊರೆ ಸಿಗರೇಟನ್ನು ಹುಡುಕಿ ತಂದು (ಅಂಬಕ. ೮೪); ಬೀಡಿಯ ಕೊರೆಯನ್ನು ನೆಲಕ್ಕೆಸೆದು (ಮುಣ್ಣುಹ. ೮೯). ೩. ಭರ್ತಿ ಕಡಮೆಯಾಗಿರುವ ಚೀಲ; ಅರಕಳಿ : ರಾಗಿ ಕೊರೆ (ರೂಢಿ). [< ಕೊಱೆ$_1$]

**ಕೊಱೆ$_5$**, ಕೊರೆ$_5$ (ನಾ). ೧. ಒಂದು ಬಗೆಯ ಧಾನ್ಯ; ಹಾರಕ: "ಕೊಱೆ – ಖಂಡನೇ, ಧಾನ್ಯಭೇದೇ ಚ (ಹಾರಕ)" (ಶಮಧಾ); ಜವೆ ಜೋಳಂ ಕೊಱೆ ಮೊದಲಾದುವರ್ಕೆ (ಲೋಕೋಪ. ೪-೫೬); ಕೊಱೆಯೆಂಬುದುಂಟು ಅಖಿಳ ಧಾನ್ಯಂಗಳ ಒಳಗೆ (ರೇವಣ. ೨೨-೫); ಕೊಱೆಯುಂಟು ಧಾನ್ಯದೊಳ್ (ಸಿದ್ಧೇಪು. ೨-೧೭). **ಕೊರೆ$_5$**: ೨. ಒಂದು ಬಗೆಯ ಔಷಧಿ ಸಸ್ಯ: ಬೀಳಹೂಲಿ, ಕೊರೆ, ಸಣ್ಣಹೂಲಿ, ನೆಲಮಾಗಳಿ, ಚೋರ (ವೈಐಗ. ೩೭-೭೪೭).

**ಕೊಱೆ$_6$** (ನಾ). ತಿರುಗಾಡುವವನು; ಸುತ್ತುವವನು. 'ತಿಱುಕೊಱೆ' ಪರಾ. [< ಕೊಱೆ$_2$]

**ಕೊಱೆ$_7$** 'ಕೂಱೆ' ನೋ.

**ಕೊಱೆಕೂಲಿ** (ನಾ). ಧಾನ್ಯರೂಪದಲ್ಲಿ ಕೊಡುವ ಕೂಲಿ: ಕರೆಯೋ ಒಡ್ಡರೆಱೆಯನಂ ಕೊಱೆಕೂಲಿಗೊಂಡಸೋ ನಾಳೆ ಮಿಕ್ಕುದನಗೆಯ ಬಾರದೇ ಎಂಬನ್ನಗಂ (ಸಿದ್ಧರಾ. ೯-೩೯). [ಕೊಱೆ$_5$ + ಕೂಲಿ]

**ಕೊಱೆಕೂಳು** (ನಾ). (ಪಕ್ಷಿಗೆ ಹಾಕುವ) ಕಾಳಿನ ಆಹಾರ; ಎರೆ; ಗ್ರಾಸ: ಬ್ರಹ್ಮಗಿಳಿಗೆ ಪಂಜರವಾದ ವಿಷ್ಣುವಾ ಗಿಳಿಗೆ ಕೊಱೆಕೂಳಾದ ರುದ್ರನಾ ಗಿಳಿಗೆ ತಾ ಕೋಳಾದ (ಅವಚಂ. ೫-೧೫); ಕೊಱೆಕೂಳಿನಾಸೆಗೆ ಮಱೆದು ನೀನೊಱಗಲು ಗಱಿ ಸಹವಾಗಿ ನುಂಗುವುದು ಕಂಡಾ (ಶಿವಗೀ. ೩೩೩). [ಕೊಱೆ$_5$ + ಕೂಳು$_2$ (< ಕೂಟ್$_1$)]

**ಕೊಱೆಗೊಳ್ಳಿ** (ನಾ). ಉರಿದುಳಿದ ಸೌದೆಯ ತುಂಡು; ಕರಿಗೊಳ್ಳಿ: ಕಱೆಗೊರಲನ ಕಣ್ಣ ದಳ್ಳುರಿಯಲಿ ಬೆಂದ ಕೊಱೆಗೊಳ್ಳಿ ನಿನಗೇಕೆ ಪಂತ (ಮೋಹತ. ೧೨-೨). [ಕೊಱೆ$_5$ + ಕೊಳ್ಳಿ$_1$]

**ಕೊಱೆತ**, ಕೊರೆತ (ನಾ). ೧. ಕೊರೆಯುವಿಕೆ; ಕುಯ್ಯುವಿಕೆ : (ಕ). **ಕೊರೆತ**: ೧. ಒಳಗಿನ ಕೊರೆತವು ಅತಿ ತೀಕ್ಷ್ಣವಾಗಿದ್ದು (ಮುನಿಮಾ. ೬); ಕೂರುಗುರ್ಗಳ ಕೊರೆತ (ಕಾಲೂರ. ೯೬-೧೯೦). ೨. ಕಂಡರಣೆ; ಕೆತ್ತನೆ: ಸಾಲಾಗಿ ಒಂದೊಂದು ಬಾಗಿಲುಗಳಿರುವಂತೆ ಕಮಾನು ಕೊರೆತಗಳಿಂದ ಒಪ್ಪುತ್ತಿತ್ತು (ಕಾಬಝಾ. ೭). ೩. (ಆಲಂ) ನೀರಸವಾದ ಹಾಗು ದೀರ್ಘವಾದ ಮಾತಿನಿಂದ ಉಂಟುಮಾಡುವ ಹಿಂಸೆ : ಅವರ ಮಾತಿನ ಕೊರೆತಕ್ಕೆ ಒಮ್ಮೆ ಸಿಕ್ಕಿಕೊಂಡವರು ಇನ್ನೊಮ್ಮೆ ಸಿಗಲು ಅಂಜುತ್ತಾರೆ. (ಒಂಟಿದ. ೩೬); ನಾ ಹೇಳೋದು ಒಣ ವೇದಾಂತವಾದರೆ ಒಣವೇದಾಂತ; ಕೊರೆತ ಆದರೆ ಕೊರೆತ (ಹೊಸಕ್ಷಿ. ೧೦೭).

[ಕೊಱೆ$_1$ + -ತ$_2$]

**ಕೊಱೆದಱು** (ಕ್ರಿ). ಸಣ್ಣಾಗಿ ಕತ್ತರಿಸು; ಚೂರುಚೂರಾಗಿ ಮಾಡು : ತರತರದ ಭುವನದೊಳು ನೆರೆದ ಜೀವರನೆಯ್ದೆ ಕೊಱೆದಱಿದು ವುರುಪಿದಾತನ ಪಾತಕಂ ಹರಹರ ವಿರೂಪಾಕ್ಷಚರಣ ಪೂಜನದಿಂದೆ ಹರೆದು ಗಣಪದವೆಂದ (ಸಾನಂಚ. ೩-೭೨). [ಕೊಱೆ$_3$ + ತಱು$_1$]

**ಕೊಱೆಪಲ್** 'ಕೊಱೆವಲ್' ನೋ.

**ಕೊಱೆವೈನವಿರ್** (ನಾ). ಚುಚ್ಚುವ ಮೈಗೂದಲು; ನಿಗುರಿದ ರೋಮ: ಒಱಗಾಲ್ಪೆಱದಲೆ ಕೊಱೆ[ಪಾಠಾಂ. ಮಱೆಯ]ವೈನವಿರಿಂದ ತುಱುಗಿದ ಮುಸುಮೊಗ ಪೆಣ್ಣಾ ತೆಱನಱಿಯದ ಕೂಟದೆಮ್ಮವನಿವನಿರೆ ಮಱೆವರೆ ಪೆಣ್ಣಳಿದಿರೊಳು (ಕುರಾಸಾಂ. ೪೪-೭).

[ಕೊಱೆ$_1$ + ವೈನವಿರ್ (< ಮೆಯ್ನವಿರ್)]

**ಕೊಱೆಯ** (ನಾ). ಕೊರೆಯಿಸಿಕೊಂಡವನು; ಕೊರತೆಯುಳ್ಳವನು. 'ಮೂಕೊಱೆಯ' ಪರಾ. [ಕೊಱೆ$_1$ + -ಅ$_7$]

**ಕೊಱೆಯಕ್ಕಿ** (ನಾ). ಕೊರಲೆಯ ಅಕ್ಕಿ; ನವಣೆಯ ಅಕ್ಕಿ (?) : ಸಿತ ಸರ್ಷಪದೊಳ್ ಕೊಱೆಯಕ್ಕಿ ದಾರ್ವಿಯುಂ ಬೆರಸು (ಖಮುದ. ೮-೪); ಕಿಱುದೆಂಗಿನ ಬೇರಂ ತಾಂ ಕೊಱೆ[ಪಾಠಾಂ. ಕಱೆ]ಯಕ್ಕಿಯೊಳಾಡಿ ನಳಿಯೊಳಟ್ಟಂಬಲಿಯಂ ಸುಱಿಯೆ ವರುಷಂಬರಂ ಜನಮಱಿಯಲ್ ವಿಷಮಿಲ್ಲಂ (ಖನುದ. ೧೬-೧೬೨). [ಕೊಱೆ$_5$ + ಅಕ್ಕಿ$_1$]

**ಕೊಱೆವಲ್**, ಕೊಱೆಪಲ್ (ನಾ). ಹರಿತವಾದ ಹಲ್ಲು; ಮೊನೆಯಾದ ಹಲ್ಲು: ಕೊಱೆವಲ್ ಬತ್ತಿದ ಕಾಲ್ ಪಿಂಬಱಿಗೇಸಂ ನೆಕ್ಕದಪು ಪೊಕ್ಕಿರ್ದ ಬಸಿಱ್ ತೆಱೆದ ಮುಖಕುಹರವರ್ದಿಸೆ ಪಿಱಿತಿನಿಗಳ ಬಳಗಮೆಯ್ದೆ ತಂದುದು ಮುನಿಯಂ (ಕಾವ್ಯಾವ. ೪೫೫). **ಕೊಱೆಪಲ್**: ಕೊಱೆಪಲ್ಲ ಕುಳಿರ ಹೇಮಂತನ್ ಪೊಱ್ಬುಬರೆ ಮುಪ್ಪಾಗಿ ಎಳಚಿಗುರ ಚೈತ್ರಂಗೆ ಬಱಿವಿಟ್ಟು ಪೋಕುಂ (ಅಕ್ಷತ್ಥಾ. ೨೭-೨೨). [ಕೊಱೆ$_1$+ ಪಲ್]

**ಕೊಱೆವೋಗು** (ಕ್ರಿ). ತುಂಡಾಗು; ಹೋಳಾಗು: ಶತಖಂಡಮಾಗೆ ನಿಜಶರಹತಿಯಿಂ ಜಾಂಬವ ಶರಂಗಳಂ ಕಡಿದನನಾದೃತನದಱ ಪಿಳ್ಕು ಮಲಗುಂ ಕ್ಷಿತಿಯೊಳ್ ಕೊಱೆವೋಗಿ ಕೂಡೆ ಕುಪ್ಪಳಿಸುಬಿನಂ (ಮಹಾಸೇ. ೭-೩೮). [ಕೊಱೆ$_1$ + ಪೋಗು$_1$]

**ಕೊಱೆಸು** 'ಕೊಱೆಯಿಸು' ನೋ.

**ಕೊಱೆಯಿಸು**, ಕೊರಿಯಿಸು, ಕೊರೆಯಿಸು, ಕೊರೆಸು, ಕೊಱೆಸು (ಕ್ರಿ). ಕೊರೆಯುವಂತೆ ಮಾಡು; ತುಂಡುಮಾಡು; ಕತ್ತರಿಸು : (ಕ). **ಕೊರಿಯಿಸು** : (ಕ). **ಕೊರೆಯಿಸು** : (ಕ). **ಕೊರೆಸು** : ಆಯಮ್ಮ ಕೋಡ ಕೊರೆಸಿರಿ (ಲೋಕಗೀ. ೧೩೭). **ಕೊಱೆಸು** : ಪರಸತಿಯ ಬೇಟದಲಿ ಮಾವನು ಕೊರಳ ಕೊಱೆಸಿದನೆಮ್ಮ ಗಂಡನ (ಕೌಶಿರಾ. ೩೭-೧೧).

ಕೊಱೆಯಿಸಿಕೊಳ್, ಕೊಱಿಸಿಕೊಳ್, ಕೊಱೆಸಿಕೊಳ್ = ಕುಯ್ಯಿಸಿಕೊಳ್ಳು : ತಱಿಸಿಕೊಂಡು ಭಕ್ತರಾದರೆಮ್ಮವರು; ಕೊಱೆಯಿಸಿಕೊಂಡು ಭಕ್ತರಾದರೆಮ್ಮವರು (ಬಸವ. ೨೫೫); ದುರುಳರಾವಣಕೀಚಕಾದಿಗಳಿರದೆ ಪರಸತಿಗಳುಪಿ ಕೊರಳನು ಕೊಱಿಸಿಕೊಂಡರು (ಅಮೃತ. ೨-೯೩); ಕೊಱೆಸಿಕೊಂಬರು ಕೊರಳನೆಂತಱ ಗುಱಿಗಳಕಟಕಟ (ನಿಭಾಗ. ೫-೧೧-೨).

[ಕೊಱೆ$_1$ + -ಇಸು$_8$]

**ಕೊೞ್** (ಗು). ಕೊಳೆತು ಅಜಗಿಜಿಯಾಗಿರುವ; ಅಸಹ್ಯವಾದ; ಕೊಚ್ಚೆಯಾದ. 'ಕೊೞ್ನೀಱ', 'ಕೊೞ್ಮಾದುೞ್' ಪರಾ. [?]

**ಕೊೞಕ**, ಕೊಳಕ (ನಾ). ೧. ಕೊಳೆಯುಳ್ಳವನು, ಹೊಲಸಾದವನು; ಹೇಸಿಗೆಯಾದವನು: ದೆಳುಕಂ, ತೊಳಕಂ, ಕೊೞಕಂ (ಶಮದ. ೨೫೯ ಪ್ರಯೋ). ೨. ಮಂಡಲದ ಹಾವಿನಲ್ಲಿ ಒಂದು ಜಾತಿ; ಕೊಳಕುಮಂಡಲದ ಹಾವು: ನವಹೆಯ ಪಿಟ್ಟಂ ಕೊಂಡೊಡನೆ ತೊಟಿಸಿ ತಿನಲತಿಮಂಡಿತಮದು ಕೊೞಕನುಗ್ರವಿಷಮಂ ಕಳೆಗುಂ (ಖಮದ ೧೦-೭೩). **ಕೊಳಕ**: ೧. ಅವರು ಸೋಮಾರಿ, ಹೇಡಿ, ಕೊಳಕ, ಕೈಲಿ ಹಾಯುವವರು ಎಂಬುದು ನೋಡಿದ ಕೂಡಲೆ ಗೊತ್ತಾಗುತ್ತಿದ್ದಿತು (ದೈಸರ್ವ. ೨೧); ಅವನು ಕೊಳಕ ಅವನ ಮೇಲಿನ ಗಾಳಿ ಬೀಸಬಾರದೆಂಬ ಭಾವನೆಯೂ ಅನೇಕರಿಗಿದೆ (ಹುಟ್ಟಹ. ೧೫೭). [ಕೊೞಕು + -ಅ]

**ಕೊೞಕು**, ಕೊಳಕು (ನಾ). ೧. ಕೊಳೆತುದು; ಹೊಲಸು; ಹೇಸಿಗೆ. 'ಕೊೞಕ' ಪರಾ. **ಕೊಳಕು**: ೧. ಕಳೆದ ಬಟ್ಟೆ ತೊಳೆದಂತೆ ಹರಿದು ಹೋಗುವುದು ಮಲಿತ ಕೊಳಕು (ಅರಳು. ೬೯೧); ಇಂದಿನ ಕಳಸಾಪುರವೆಂದರೆ ಕೊಳಕಿನ ಕೊಂಪೆ (ಕಳಹು. ೧೦೩). (ಗು). ೨. ಕೊಳೆಯಾದ; ಹೊಲಸಾದ: ನೀನು ಹೀಗೆ ಕೊಳಕು ಜನರ ಜೊತೆಯಲ್ಲಿ ಬೆರೆಯುವುದು ನನ್ನ ಮನಸ್ಸಿಗೆ ಏನೂ ಸರಿಬರುವುದಿಲ್ಲ (ಕೀಮೋಡ. ೩೨). [< ಕೊೞ್₁ + -ಕು?]

**ಕೊೞಚೆ**, ಕೊಳಚೆ (ನಾ). = ಕೊಳಕು: ತೃಷಾವಿಷಾದಮಂ ಕೊೞಚೆಯ ನೀರೊಳೇ ಕಳೆವರೆಂದೊಡೆ (ಚಕವ. ೧-೩೭). **ಕೊಳಚೆ**: ಕೊಳಚೆಯ ನೀರಿನಲ್ಲಿ ಗುಂಪನಜಿಸುವಿರಿ ಮರುಳೆ (ಬಸವ. ೫೬೪); ಹೊಂಡೆದ್ದು ರಕುತದ ಸಾಲುಗೊಳಚೆಯ ಕರುಳ ಕುಸುರಿಯ ಬಸಿವ ನೆಣವಸೆಯ (ಕುವ್ಯಾಭೀ. ೧೦-೧೧); ಸ್ವರ್ಗದಿಯುಂ ಪೊರ್ದಿರ್ಪವರ ಕಿಗ್ಗೊಳಚೆಯ ಕೊಳೆನೀರ್ಗೊಲ್ವನೇ (ಪಾಪ್ರಾಶ. ೨೯); ಹೊಂಡದ ಕೊಳಚೆಯ ನೀರನು ಕುಡಿದರು ಕಪ್ಪೆಗದೆಷ್ಟು ಠೇಂಕಾರ (ಇಂಚಾಪ. ೨೧೨-೫೦). [< ಕೊೞ್₂]

**ಕೊೞಲ್**, ಕೊಳಲ್, ಕೊಳಲು (ನಾ). ಬಿದಿರ ಕೊಳವೆಯಿಂದ ಮಾಡಿದ ಊದುವ ವಾದ್ಯ; ವೇಣು: "ಕೊೞಲ್ - ವೇಣುವಾದ್ಯ. (ಕೊಳಲೆಂಬ ಕ್ರಿಯೆಯೊಳ್ ಕುಳಂ)" (ಶಮವ. ಪರಿ. ೨); ಎಕ್ಕ ಮದ್ದಳೆಯ ಕೊೞಲ ಝುಂಕಾರದ ಪಱೆಗಳ್ ಮುಂದೆ ಬಾಜಿಸುತ್ತಂ (ವಡ್ಡಾರಾ. ೫೦-೧೨); ದೆಂಟನೂದುವಂಗೆ ಕೊೞಲ್ ದೊರೆಕೊಂಡು ದೆಱೆದಂತೆ (ಧರ್ಮಾಮೃ. ೧೦-೨೮೦); ಮಾರಹರನ ಕೊೞಲ ಸನ್ನೆಯ ವರರವಕನುಸರವಿದೆಂದಿನಂ (ಜಗವಿ. ೪-೧೧೫); ಕರಡೆಯು ಮದ್ದಳೆಯ ಕೊೞಲ ಪಳವದ ... ಕಿನ್ನರದ ಸರಮೆ ಸರವೂ ಪೊೞಲೊಳ್ (ಸೂಕ್ತಿಸು. ೪-೧೦೪). **ಕೊಳಲ್**: ತ್ರಿಭಂಗಿಯಿಂದಂ ನಿಂದು ಒಪ್ಪುತಿರ್ಪೊಂದು ಪೊಸ ಕೊಳಲಂ ಕೊಳುತ್ತಂದು ... ಅಧರದೊಳ್ತಂ ದಿರಿಸಿ ಕೊಳಲಸೊಪ್ಪದಿಂ (ಅನಂರ. ೧೮೧-೧೪). **ಕೊಳಲು**: ಸವೆಯದೂದುವ ಕೊಳಲು ಮೈಯ ತವರದ ಕೊಡಿಗೆ ಎಸವುತಿರೆ (ಬಸರ. ೯-೧೦೨); ಕೊಳಲನೂದುತ್ತಾ ಬಂದ ನಮ್ಮ ಗೋಪಿಯ ಕಂದ ಕೊಳಲನೂದುವುದು ಬಲು ಚೆಂದ (ಪುರಂದ. ೧-೧೩೩-೧); ಕೊಳಲಿಗೆ ಪಶು ಮಿಗ ಘಂಟೆಗೆ ಹಸುಳೆ ಜೋಗುಳಿಗೆ ಸರ್ಪ ಸುನಾಗಸರಕೆ (ಭರತ. ೧-೮೮); ಕೊಂಬು ಕೊಳಲು ನಾಗಸರ ಭೇರಿ ತಂಬಟೆಬೊಂಬುಳಿ ಬುರುಗು ಡಿಂಡಿಮದ (ಕಂನವಿ. ೮-೧೯); ಎಳೆಯ ಮಾವಿನ ಮರದ ಕೆಳಗೆ ಕೊಳಲನೂದುತ ಗೊಲ್ಲಗೌಡನು (ಗೋಹಾಡು. ೩೧); ಕೊಳಲೂದಿದ ತುಟಿಗಳಲ್ಲಿ ಪಾಂಚಜನ್ಯ ಪುಟಿಯಿತು (ನೆಲಮು. ೪೦).
[ದೇ. । ತಮಿ. ಮಲ. ತುಳು. ಕುೞಲ್; ತೆಲು. ಕ್ರೋವಿ]

**ಕೊೞವಿ**, ಕೊಳಬೆ, ಕೊಳವಿ, ಕೊಳವೆ, ಕೊಳಾಯಿ, ಕೊೞವೆ (ನಾ). ೧. ಬಿದಿರು ಮೊದಲಾದುವುಗಳ ಪೊಳ್ಳಾದ ಉದ್ದನೆಯ ನಾಳ, —ನಳಿಕೆ "ಧಮನಿಯೆನೆ ಕೊೞವಿ" (ಮಂಗರಾ. ೬೧-೨೦); ಕೊೞವಿ, ಉಱುಗು, ಬೆಱಗು, ಮೊಱಗು (ಶಬ್ದಾನು. ೧೯೦ ವ್ಯಾಖ್ಯಾ). **ಕೊಳಬೆ**: ೧. ಇದನ್ನು ಮರದ ಕೊಳಬೆಯಲ್ಲಿ ಇಟ್ಟಿದ್ದಾರೆ (ಚೀನಬಾ. ೧೫). **ಕೊಳವಿ**: ೧. ಇವೌಪಾಸನದ ಕೊಳವಿಯೊ (ಕುವ್ಯಾಆ. ೧೫-೧೭); ಅದ್ದಿ ಧಿಂತಿಟ್ಟು ಗಗನಕೆದ್ದಿತು ಕೊಳವಿಯೊಳೊಗೆ ಬೆಂಕಿ ನಾಲಗೆ ನೀಡುವಂತೆ (ಭರತ. ೨೪-೩೫); ಕುಂಕುಮದ ಕೊಳವಿಗಳಂ ಕರಗಳಿಂ ಪಿಡಿದು (ಸೌಗಂಧಿ. ೧೩೧-೧೮). ೩. ಒಂದು ಅಳತೆಯ ಪ್ರಮಾಣ; ಚಟಾಕು: ದರವು ಮಾತ್ರ ರೂಪಾಯಿಗೆ ಐದು ಕೊಳವಿ (ಚಟಾಕು) (ಪ್ರಗಜ. ೬). **ಕೊಳವೆ**: ೧. ಬಿದಿರೊಳಗೆ ಟಿಸ್ಸಿಡದವಿ ಬಳೆಕದಜಿ ಮೇಲದಂ ಮತ್ತೆ ಮೆಲ್ಲನೆ ತೆಗೆದು ಕೊಳವೆಯುಂಪದಿ ಮಾಡಿ ಅಲ್ಲಿ ಸಕ್ಕರೆಯುಕ್ಕ (ಸೂಪಶಾ. ೧-೩೭); ಕುಂಕುಮ ರಸದುಂಬಿ ಕೈಯಂಡೆಯ ಕೊಳವೆಯ ಚಿಗಿದು (ಮೋಹತ. ೧೪-೬೫). 'ಕೊಳವೆ ಬಾವಿ' ಪರಾ. **ಕೊಳಾಯಿ**: ೩. ನೀರಿನ ನಲ್ಲಿ; ನಳ (ಉಕ): ಸರೋಜ ನೀರಿಗಾಗಿ ಕೊಳಾಯಿ ಬದಿಗೆ ಹೋದ ಸಂಧು ನೋಡಿ (ಪತಿ. ೧೪); ನೀರಿನ ಕೊಳಾಯಿಗಳನ್ನು ಕಟ್ಟಿ ನೀರಿನ ಸೌಕರ್ಯ ಒದಗಿಸಿದ್ದಾರೆ (ದಲ್ಲಿಪ. ೧೦೬). **ಕೊೞವೆ**: ೧. (ಕ).
[ದೇ. । ತಮಿ. ಕುೞಾಯ್, ಕುೞಾಯ್; ಮಲ. ಕುೞ; ತುಳು. ಕೊಳವೆ, ಕೊಲವೆ, ಕೊಳಾಯಿ; ತೆಲು. ಕೋಲು, ಕ್ರೋಲು]

**ಕೊೞವಿಮೀಂಟೆ** (ನಾ). ಕೊಳವೆಯ ಮೂಲಕ ಕಲ್ಲು ಹರಳನ್ನು ಹಾರಿಸುವ ಒಂದು ಸಾಧನ: ಮಱುಗುದ್ದಿಯುಂ ಕೊೞವಿಮೀಂಟೆಗಳಿಂದಿಟ್ಟು ಕೆಡಪಲ್ (ಚಿಕವಂ. ೪-೨೦). [ಕೊೞವಿ + ಮೀಂಟೆ]

**ಕೊೞವೆ** 'ಕೊೞವಿ' ನೋ.

**ಕೊೞಗಾಲ** (ನಾ). ಒಂದು ಊರಿನ ಹೆಸರು: ಬಿಟ್ಟೋಟ ರಾಜ್ಯುತ್ಯ ಕೊೞಗಾಲ ಗಂಗಯ (ಎಕ. IV, ಹೆಗ್ಗಡ. ೧೦೪-೧೫; 1037). [?]

**ಕೊೞುಂಗೆಱೆ** (ನಾ). ಒಂದು ಬಗೆಯ ತೆರಿಗೆ (?): ಕಾಣಿಕೆಯುಂ ಕೊೞುಂಜಿಗ್ಗೆಱೆಯುಮಿಂತಿನಿತುಮಂ (ಸೌಇಎ. ೧೯೩೮, ೩೨೭-೪೯; 1075). [?]

**ಕೊೞೂರ್** (ನಾ). ಒಂದು ಊರಿನ ಹೆಸರು: ಜನ್ಮಕ್ಷೇತ್ರಂ ಕೊೞು(ೞೂ)ರ್ ನ್ನಾಡು ಗ್ರಾಮಂ (ಇಆ. XVIII, ೩೩೭-೪; 8ನಯ ಶತ).
[? + ಊರ್]

**ಕೊೞ್₁**, ಕೊಳೆ₁ (ಕ್ರಿ). ೧. ಕೆಟ್ಟು ನಾರು; ಹೊಲಸಾಗು; ಕೊಳೆಯಾಗು: "ಕೊೞ್ - ಚೀರ್ಣೇ, ಕಾಯಮಲೇ ಚ" (ಶಮಧಾ); ಕೊೞೆ [ಪಾಠಾಂ. ೪]ದ ಪುಲ್ಲದರ್ಕಂ ತೊಱೆವಂತನಿತುಮಂ ಕೊೞೆದು (ವಡ್ಡಾರಾ. ೪೬-೧೨); ಎನಿತೊಳವು ಕೊೞೆವ ಪಡುಕೆಗಳನಿತೆ ದುರ್ಗಂಧಮವರ ಮೆಯ್ಯ . . . ನಾತಮುಂ (ಶಾಂತಿಪು. ೭-೧೨೦); ಪಿರಿಯ ಸಿರಿಯಂ ಜನಾಗಮ ಪರಿಣತಿಮತಿ ಕೊೞೆ [ಪಾಠಾಂ. ೪]ದ ಪುಲ್ಲದಕ್ಕಂ ಬಗೆನಂತಿರೆ ಬಗೆದು (ಅಜಿಪು. ೨-೧೧೩); ಎತ್ತ ಮುಟ್ಟಿದ ಕುಂಬಳಕಾಯಂತೆ ಒಳಗೊಳಗೆ ಕೊೞೆತು (ಧರ್ಮಾಮೃ. ೩-೩೫). **ಕೊಳೆ₁**: ೧. ಕೊಳೆತ ಬೆರಳನು ಭುಕ್ತಶೇಷದೊಳುಳುಹಿದೊಡೆ ಕಂಡೀಕೆ ಚಿತ್ತದೊಳಳುಕದುಪಭೋಗಿಸೆ (ಸಂಧಪ. ೩೩-೨೨); ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು (ಕನಕ. ೫೨-೩); ಕುಂಬಳಕಾಯಂತೆ ಮನದೊಳು ಕೊಳೆವುತ ಡಂಬಕರಿಹರದು ಪ್ರತಿವೆ (ಭರತ. ೧೭-೧೪); ಹಳಸದು ಕೊಳೆಯದು ಹುಳಿಗಟ್ಟಿಕೊಳ್ಳದು . . . ಅಮಳ ಸುಭಾಷಿತ ರಸವು (ಇಂಚಾಪ. ೨೨೭-೧೦೦).

೨. (ಆಲಂ) ಪ್ರಗತಿಯಿಲ್ಲದೆ ಇದ್ದ ಸ್ಥಾನದಲ್ಲಿಯೇ ಇರು; ಕೊಳೆ ಬೀಳು: ಜನನಾಯಕನಾದ ಮೋಹನನು ಸೆರೆಮನೆಯಲ್ಲಿ ಕೊಳೆಯುತ್ತಿರುವುದನ್ನು ಜನರು ಸಹಿಸುವಂತಿರಲಿಲ್ಲ (ಪಂಜಪಂ. ೨೦೯); ಅಂಥವರು ಅದೇ ತರಗತಿಯಲ್ಲಿ ಕೊಳೆಯುವುದು ಉಚಿತವಲ್ಲ (ಶಿಕ್ಷದ. ೯೮).

[ದೇ. ‖ ತಮಿ. ಕುೞ್ಯೆ; ಮಲ. ಕುೞಯು, ಕುೞಮ್ಬು; ತುಳು. ಕುರೆ. ಕುರು; ತೆಲು. ಕ್ರುಳ್ಳು]

**ಕೊೞೆ$_3$, ಕೊಳೆ$_3$** (ನಾ). ೧. ಕೊಳೆತುದು; ಹೊಲಸು: "ಕೊೞೆ = ಜೀರ್ಣೇ, ಕಾಯಮಲೇ ಚ" (ಶಮುಧಾ); ಕೊೞೆಯುಂ ಬಿಜ್ಜುಂ ಲೋಳೆಯುಮಳವಲ್ಲದ ವಜ್ರಲೇಪದಂತಿರೆ (ಧರ್ಮಾಮೃ. ೪-೧೬೬); ತನುಸೌಖ್ಯಮಕ್ಕುಮಕ್ಕುಮೆಂದೆನಿತೆನಿತಂ ತೊಳೆದೊಡಮದಕ್ಕೆ ಕೊೞೆ ಸಹಜಂ (ಸಮುಪ. ೬-೩೦); ತೊವಲ ಕೊೞೆಯುಂ ಪುೞುಗಳುಂ ಸುರಿಯೆ (ಜೀವಸಂ. ೪೩-೧೧). (ಗು). ೨. ಕೀಳಾದ; ಅಧಮವಾದ. 'ಕೊೞೆಗಬ್ಬ', 'ಕೊೞೆದೆಯ್ವ' ಪರಾ. **ಕೊಳೆ$_3$**: ೧. ಬಿಲದಿ ಮುಳುಗಲು ಕೊಳೆಯ ಕಾಯದ ಮಲವು ಪೋಗುವುದಾಗಲೇ (ಗಗಪಾ. ೯-೪೫). ೩. ಕೆಸರು; ರಾಡಿ; ಕೊಚ್ಚೆ: ಅತಿವೃಷ್ಟಿಯಾಗೆ ಕೆಯ್ಯೊಳು ನೆರೆಯ ಪಾಲೊ ಅಥವಾ ಕೊಳೆಯ ಪಾಲೊ ತಾನಾಗುವುದು ನಿಶ್ಚಯಂ (ಹಬ್ಬರ. ೨೪-೧೦); ಎಮ್ಮೆ ಕೋಣಗಳಾಟ ಕೊಳೆಯಲ್ಲಿ ಕುಂಟೆಯೊಳ್ (ಕಾಲೂರ. ೧೨೧-೨೫೩).

ಕೊಳೆಹಾಕು = ಪ್ರಗತಿಯಿಲ್ಲದೆ ಇದ್ದಲ್ಲಿಯೇ ಇರಿಸು: ಅವನನ್ನು ಅದೇ ಕೆಲಸದಲ್ಲಿ ಕೊಳೆಹಾಕಿದ್ದಾರೆ (ರೂಢಿ). [< ಕೊೞೆ$_1$]

**ಕೊೞ್ಗಂಪು** (ನಾ). ಕೊಳೆತದ ನಾತ; ಹೊಲಸು ವಾಸನೆ; ದುರ್ಗಂಧ: ಕೊೞ್ತೊಸರುತಿರ್ದಾ ಮೆಯ್ಯನ್ ಎಲ್ಲ ಬತ್ತಲೆಗೆಯ್ದು, ನಮುಗದಱ ಕೊೞ್ಗಂಪು ಬಡಿವುದನ್ ತಪ್ಪಿಸಿಕೊಳಲ್ ... ಮೇಡ ಕೋಡಿನ ಮೇಲೆ ಕುಳ್ಳಿರ್ದರ್ವರ್ (ಅಂತಿಗೊ.೧೯-೩೯೮). [ಕೊೞೆ$_3$+ ಕಂಪು]

**ಕೊೞ್ಗಣ್, ಕೊಳೆಗಣ್ಣು** (ನಾ). ಕೊಳೆ ತುಂಬಿದ ಕಣ್ಣು; ಹೊಲಸು ಕಣ್ಣು: ಕೊೞ್ಗಣ್ಣುಂ ದಿಟ್ಟಬಾಯುಂ ಕೂಡಿದವರ್ಪುರ್ಬುಂ (ಧರ್ಮಾಮೃ. ೬-೨೨೫). **ಕೊಳೆಗಣ್ಣು**: ನೀರುಗಣ್ಣು, ಜಾರುಗಣ್ಣು, ಕೊಳೆಗಣ್ಣು, ಹುಳುಗಣ್ಣು (ಕುಕಸ. ೩.೨೮). [ಕೊೞೆ$_3$ + ಕಣ್]

**ಕೊೞ್ಗಬ್ಬ** (ನಾ). ಕೀಳು ತರಗತಿಯ ಕಬ್ಬ; ದೋಷಯುಕ್ತವಾದ ಕಾವ್ಯ: ನಿರರ್ಥಮಪ್ಪ ಕೊೞ್ಗಬ್ಬಮನುಬ್ಬರಮಾಱ್ಪ ಗರ್ವದಿಂದೆಸೆವನ ನಿಕ್ಕ ಕಿಚ್ಚಿನೊಳಗಿಕ್ಕಿದೊಡಾಗರೆ ಮತ್ತೆ ಕಬ್ಬಿಗರ್ (ಸೂಕ್ತಿಸು. ೧-೬೪).
[ಕೊೞೆ$_3$ + ಕಬ್ಬ$_1$]

**ಕೊೞ್ಗಬ್ಬಿಗ** (ನಾ). ಕೀಳು ಕಾವ್ಯಗಳನ್ನು ರಚಿಸುವವನು; ಕೆಟ್ಟಕವಿ: ಮಹಾಕವೀಂದ್ರ ಮಾಧವನೆಡೆಯಪ್ಪೆನೆಂಬ ಕೊೞ್ಗಬ್ಬಿಗನಿನ್ನಯ ಗರ್ವಮೆಂತುಟೋ (ಧರ್ಮನಾ. ೧-೩೬). [ಕೊೞ್ಗಬ್ಬ+ -ಇಗ]

**ಕೊೞ್ಗೊಳ್** (ಕ್ರಿ). ಕೊಳೆಯಾಗು; ಮಾಸು; ಹೊಲಸಾಗು: ಕುಸುಮಘಟಾನ್ವಿತೆ ಕೊೞ್ಗೊಂಡ ಸೀರೆಯಂ ಪೊದೆದು ವಸ್ತ್ರಮಂ ಧನಮನಪೇಕ್ಷಿಸಿ ಗುರುಕುಲಕ್ಕೆ ... ಪೋಪಳ್ (ಜಾತತಿ. ೧೯-೧೬).
[ಕೊೞೆ$_3$ + ಕೊಳ್$_1$]

**ಕೊೞ್ದುಪ್ಪ** (ನಾ). ಕೆಟ್ಟತುಪ್ಪ; ಹೊಲಸು ನಾರುವ ತುಪ್ಪ: ಕುದಿಸಿ ಕೊೞ್ದುಪ್ಪಮಂ ಕುದಿದ ದುಗ್ಧದೊಳ್ ಬೆಣ್ಣೆಗೊಂಡು ಕಾಸಿದೊಡಂ ಮೇಣ್ ಸದಗುಪ್ಪೆ ಬೆರೆದದಂ ಕಾಸಿದೊಡಂ ಕಸ್ತುರಿಯ ಗಂಧಮಂ ಗೆಲಲಕ್ಕುಂ (ಲೋಕೋಪ. ೮-೪೦). [ಕೊೞೆ$_3$ + ತುಪ್ಪ]

**ಕೊೞ್ದೆಯ್ವ** (ನಾ). ಕೀಳಾದ ದೈವ; ಹೀನದೇವತೆ: ಮಾರಿಗೆ ಮುಸಣಿಗೆಯನಿಪ್ಪ ಕೊೞ್ದೆಯ್ವಂಗಳ್ (ಸಮುಪ. ೯-೧೨೬).
[ಕೊೞೆ$_3$ + ದೆಯ್ವ]

**ಕೊೞ್ನಾಱು, ಕೊಳೆನಾಱು** (ಕ್ರಿ). ಕೊಳೆತು ಕೆಟ್ಟ ವಾಸನೆ ಬರು; ಗಬ್ಬುನಾರು: ಅಗುರ್ವಿನ ಕೊೞ್ನಾರ್ಪ ಕೋೞ್ಕಸಱ ಬಾವಿಯೊಳ್ (ಆದಿಪು. ೨-೪೩); ಜಲಧಿಯೊಳು ಕಪ್ಪೆ ಸತ್ತೊಡೆ ಜಲಧಿಯ ನೀರೆಲ್ಲಮಟ್ಟೆ ಕೊೞ್ನಾರ್ಪುದೆ (ಧರ್ಮಾಮೃ. ೫-೨೪೦); ಇಂದಿನಿರುಳೊಳ್ ಮೂವರ್ಮಂತ್ರಿಗಳ್ ತನ್ನಂ ಕೊೞ್ನಾಱುವ ಕೆಸಱುಳ್ಳ ಬಾವಿಯೊಳ್ ಮುೞುಗಿಸಿ (ಪೂರ್ವಪು. ೧೮); ಕಟ್ಟಿದ ಪಲ್ಗಳಿಟ್ಟೆಡೆಯ ಕೀಟಗಳಿಂ ಕೊೞ್ನಾರ್ವ ಬಾಯ್ (ಸೂಕ್ತಿಸು. ೮-೩೮೪). **ಕೊಳೆನಾಱು**: ಪುಳಿತುದು ... ಪಲವು ದೆವಸಮಿರ್ದುದು ಕೊಳೆನಾರ್ವುದು ರುಚಿಯಲ್ಲದ ಪಿಂಡಂ ಕುದಿರೆಗೆ ತಾಂ ಪೊಲ್ಲದೆನಿಪ ಕವಳಮನಿಪ್ಪಂ (ಅಶ್ವಶಾ. ೬-೮೧). [ಕೊೞೆ$_3$ + ನಾಱು$_1$]

**ಕೊೞ್ನೀರ್, ಕೊಳೆನೀರ್** (ನಾ). ಕೊಳೆತ ನೀರು; ಮಲೆತ ನೀರು; ಹೊಲಸಾದ ನೀರು: ಹೊಲೆಯಂ ಮೊದಲಾಗಿ ... ಕುಡಿಯಂ ಕುಲಹೀನನಾಗಿಯುಂ ಕೊಗಲ ಕೊೞ್ನೀರನೆಂದೊಡಕ್ಕುಮೆ ಕುಡಿಯಲ್ (ಸಮುಪ. ೬-೧೯). **ಕೊಳೆನೀರ್**: ಸ್ವನರ್ದಿಯಂ ಪೊರ್ದಿರ್ಪವಂ ಕಿಕ್ಕೊಳಚೆಯ ಕೊಳೆನೀರ್ಗೊರ್ಲ್ವನೇ (ಪಾಪ್ರಾಕ. ೨೯).
[ಕೊೞೆ$_3$ + ನೀರ್$_1$]

**ಕೊೞ್ನೆತ್ತರ್** (ನಾ). ಹೊಲಸಾದ ನೆತ್ತರು; ಕೆಟ್ಟ ರಕ್ತ: ಪಡಿಕೆಯ ತಾಣಮೆಯ್ದೆ ಕೊೞ್ನೆತ್ತರ ಕೀವಿನ ಭಾಜನಂ (ಬಾಧಪು. ೫-೩೦).
[ಕೊೞೆ$_3$ + ನೆತ್ತರ್]

**ಕೊೞೆಯಮ್ಮ** (ನಾ). ಒಬ್ಬಾತನ ಹೆಸರು: ಕೊೞೆಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕೆಱೆಯಮ್ಮಾಡಿಸಿ (ಎಕ. VIII, ಸೊರಬ. ೧೦೦-೬; 986 ?). [ಕೊೞೆ ? + ಅಮ್ಮ$_1$]

**ಕೊೞ್ವಾವು** (ನಾ). ಕೊಳಕುಮಂಡಲದ ಹಾವು: ವಸು ಜ್ವ(ಜ)ರಯು(ಗ)ಸಿದೊಡೆ ಹೊಲೆಯರ ಮಸಣದ ಬೂದಿಯನೆ ಪೂಸುಗಲ್ಲದೊಡುದ್ಧೂಳಿಸು ತಡೆಯದೆ ಕೊೞ್ವಾವಿನ ಭಸಿತಮನನಿತಱೊಳೆ ತಜ್ಜ್ವರಂ ಪ್ರಶಮಿಸುಗುಂ (ಲೋಕೋಪ. ೯-೨೦೬); ಜಳಮತಿಗೆ ಧರ್ಮಮಂ ನಿರ್ಮ್ಮಳಮಪ್ಪಂತಾಗಿ ತಿಳಿಪುತಿರ್ದೊಡಮೆಂತುಂ ತಿಳಿಯದನಂತುಟೆ ತಿಳಿಗುಮೆ ಕೊೞ್ವಾವಿಂಗೆನಿತನೋದೆಯುಂ ಗಾರುಡಮಂ (ಸಮುಪ. ೧೩-೬೩); ಕೊೞ್ವಾವು ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು (ಧರ್ಮಾಮೃ. ೨-೧೦೨); ಮತ್ತಮಲ್ಲಿ ಕೊೞ್ವಾವಾಗಿ ಪುಟ್ಟಿದೊಡೆ (ಬಂಹರಿ. ೧೩-೩೩ ವ); ಕೊೞ್ವಾವಿನ ಕೂರ್ಯನ ವಿಷವುೞಿಗುಂ ಗೋರಟೆಯ ಮೂಲಮಂ ಪೂಸಲೊಡಂ (ಖವುದ. ೧೦-೬೮). [ಕೊೞೆ$_3$ + ಪಾವು$_1$]

**ಕೊೞ್ಸಕ್ಕದ** (ನಾ). ಬಹಳ ಹಳೆಯ ಸಂಸ್ಕೃತ; ಪ್ರಚಲಿತವಲ್ಲದ ಸಂಸ್ಕೃತ: ಪೞಗನ್ನಡಂ ಪುದುಂಗೊಳೆ ಕೊೞ್ಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತುಂ ಮೆಟಸಂ ಕೋದಂತಿರೆ ಪೇಟ್ವೞಿಗವಿಗಳ ಕವಿತೆ ಬುಧರನೆರ್ದೆ ಗೊಳಿಸುಗುಮೇ (ಕಾವ್ಯಾವ. ೫೫). [ಕೊೞೆ$_2$ + ಸಕ್ಕದ]

**ಕೊೞ್ಸುಸಿಲ್** (ನಾ). ಕೆಟ್ಟ ಸುರತ; ಹೀನವಾದ ರತಿ: ನೀಚ ಶಬರ ಚೇಟಚೇಟ ಪರಮ ದರಿದ್ರಾದಿಗಳ್ ನೆಗೞ್ದ ಕೊೞ್ಸುಸಿಲೆಲ್ಲಂ ರಸಾಭಾಸಂಗಳೆಂದಱಿವುದು (ರಸರ. ೪-೨೫೯ ವ).
[ಕೊೞೆ$_2$ + ಸುಸಿಲ್]

**ಕೊೞ್ಗಸಱ್$_1$** 'ಕೋೞ್ಗಸಱ್$_1$' ನೋ.

**ಕೊೞ್ಗಸಱ್$_2$**, ಕೊಗ್ಗೆಸರು, ಕೊಗ್ಗೆಸಱ್, ಕೊಗ್ಗೆಸಱು, ಕೊಳ್ಗೆಸಱ್, ಕೋಳ್ಕೆಸಱ್, ಕೋಳ್ಗೆಸಱ್, ಕೋೞ್ಕೆಸಱ್$_2$, ಕೋೞ್ಗೆಸಱ್$_2$ (ನಾ). ಮಂದವಾದ ಕೆಸರು; ಅಜಗಿಜಿಯಾದ ಕೆಸರು, ಬಗ್ಗಡ: ಅಮರ್ದಿನ ಕೊೞ್ಗಸಱಾೞೆ ಸರೋವರಂ (ಉದ್ಭಟ. ೯-೮೪).

**ಕೊಗ್ಗೆಸರು :** ಹುಬ್ಬುಗಳು ಗಂಟಿಕ್ಕಿ ಹೊಯ್ದಾಡಿದರು ಸಮರದ ಲೀವುದ್ದಿ ಕೊಗ್ಗೆಸರಾಗಿ ರುಧಿರದ ಹಬ್ಬವಾಗಲು (ಮೂಲರಾ. ೬-೪೯) ; ಸಾರ ಪರಿಮಳವಿರಲ್ಕೊಗ್ಗೆಸರ ಮೈಗೆ ಲೇಪಿಸಿ ಕೊಂಬ (ಪತಿಲ. ೧೬-೨೬). **ಕೊಗ್ಗೆಸಱ್ :** ಪೌರುಷದೇವನ ಲಲನೆಯಪಾಪದ ಕೊಗ್ಗೆಸಱೊಳ್ [ಪಾಠಾಂ. ಕಗ್ಗೆಸರೊಳ್] ಪಂಕಜದಂತಿರೆ ಪುಟ್ಟಿದಳೊಲವಿಂ (ಆದರ. ೧೪೭-೧). **ಕೊಗ್ಗೆಸಱು :** ನಡೆವುತ್ತ ಕೊಗ್ಗೆಸಱಲ್ಲಿ ಕಾಲ್ಗಳು ಜಾಱಿ ನಡನಡುಗಿ (ಬಸಪು. ೧೦-೬) ; ಕೊಗ್ಗೆಸಱು ಕಡಿಖಂಡ ಮಾಂಸದ ನೆಗ್ಗಿದೆಲುಗಳ ಶಸ್ತ್ರನಿಕರ (ನಿಘಾಗ. ೧೦-೫೬-೨೪). **ಕೊಳ್ಗೆಸಱ್:** ಬಂಡೆಂಬ ಕೊಳ್ಗೆಸಱೊಳಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯರಸದ ಕುಟುಕಿತ್ತು ಬಾಣಂತಿದುಂಬಿ ಮೆಱೆದವು (ಹಱಾ. ೩-೪೧) ; ಸಂಸಾರವೆಂದೆಂಬ ಕೊಳ್ಗೆಸಱ ತೊಳೆದವರು (ಸಿದ್ಧೇಪು. ೨೦-೧೦). **ಕೋಳ್ಕೆಸಱ್ :** ಕೋಳ್ಕೆಸರ್ಮೞುವಂ ಪಾಲ್ಗಡಲೆಂದು ಕಂಡರಕಟ (ರಕ್ಷಾಶ. ೬೯). **ಕೋಳ್ಗೆಸಱ್:** ಮಿದುಳ ಕೋಳ್ಗೆಸಱ ಹೊನಲಿಡುವ ರಕುತದ (ಹಱಾ. ೧೨-೩೪); ಪಟ್ಟದಾನೆಗಳು ಕಹ್ಗೆಸೆದುವು ಮದದಿಂದ ಪುಟ್ಟಸುತಲ್ಲಿ ಕೋಳ್ಗೆಸಱ(ಕುರಾಸಾಂ. ೪-೭೧); ಜೊಂಡೇಳ್ದ ಕಾಳ್ಮಿದುಳ ಕೋಳ್ಗೆಸಱಿಂದ (ರಾಜಶೇ. ೫-೧೨೦ ವ). **ಕೋಟ್ಕೆಸಱ್₂ :** ಅಗುರ್ವಿನ ಕೊಟ್ನಾರ್ಪ ಕೋಟ್ಕೆಸಱ ದಾಱಿಯೊಳರ್ದ (ಆದಿಪು. ೨-೪೬); ಮಿದುಳ ಕೋಟ್ಕೆಸರೊಳ್ ಪೊಕ್ಕು ಪೊಕ್ಕು (ಗದಾಯು. ೬-೨೮ ವ). **ಕೋಟ್ಗೆಸಱ್₂:** ಕುಳಿರ್ವಿಂದುವೆಂಬ ತಿಳಿಗೊಳದೊಳಗೊಯ್ಯನೆ ಚಂದ್ರಿಕಾಂಬುವಂ ಕುಡಿಯಲ್ಕೆಂದೊಳವೊಕ್ಕಮುಮರ್ದಿನ ಕೋಟ್ಗೆಸಱೊಳಬ್ದುದೆನಿಸಿತ್ತು ನಿಭೃತ ಚರಣಂ ಹರಿಣಂ (ಕಾದಂಪೂ. ೨೮೬). [ಕೊಟ್ + ಕೆಸಱ್]

**ಕೊಟ್ರಲೆ** 'ಕೊತ್ತಲೆ' ನೋ.

**ಕೊಟ್ರಲೆಪಳ್ಳಿ** (ನಾ). ಒಂದು ಹಳ್ಳದ ಹೆಸರು : ಅನ್ತ ಬನ್ದು ಕೊಟ್ರಲೆ ಪಳ್ಳದ ಅಲ ಕಿಱುಕೆಯ ಕರ್ಗಲ್ಲ ಒಳ್ಳಿಯೆ (ಮ್ಯಆರಿ. ೧೯೧೯, ೧೦-೭; 900). [ಕೊಟ್ರಲೆ? + ಪಳ್ಳ]

**ಕೊಟ್ರೆಟಿ** 'ಕೊತ್ರಟಿ' ನೋ.

**ಕೊಟ್ರೂಬ** (ನಾ). ಒದ್ದಾಪತನ ಹೆಸರು : ಕೊಟ್ರೂ[ಬ]ನ ಪೊಲ[ಮನ] ಕಾದುವೆಮನ್ನು ಪಂಚ್ಚೇದಿಸಿ ನಡವಾಗಳ್ದ ಬಟ್ಟಗೆಱೆನೆಱೆಮ್ಮ ಕಲಿಗಳ್ನೆಂಟೋ (ಸೌಇಇ. XI-i, ೨೧-೬ ; 893). [?]

**ಕೊಟ್ನೆಣ** (ನಾ). ಅಜಗಿಜಿಯಾದ ಕೊಬ್ಬು, —ನೆಣ : ಬಿಸಿಲ ಬೆಕ್ಕಯಂತೆ ಕರಗಿ ಕಱಂಪು ನಾಱುವ ಕೊಟ್ನೆಣನುಮಗುರ್ವರ್ಂ ಪಡೆಯ (ಶಾಂತಿಪು. ೭-೯೫ ವ). [ಕೊಟ್ + ನೆಣ]

**ಕೊಟ್ಪುಯ್ಯಲ್** (ನಾ). ತುರುಗಾಳಗ (?) : ದೋರದ್ದೆಯ ಮಗಂ ಮಲ್ಲುಗಂ ಕೊಟ್ಪುಯ್ಯಲ್ಪರಿದು ತುಱುವುಂ ಕೆಱೆಯುಮುಣಿಕ್ಕಿಸಿ ಕಾದಿ ಸತ್ತಂ (ಎಕ. XII, ತಿಪಟೂ. ೫೫-೨; 889). [< ಕೋಳ್ + ಪುಯ್ಯಲ್]

**ಕೊಟ್ಪೋಕ** (ನಾ). ಒಂದು ವಂಶದ ಹೆಸರು (?) : ಕೊಟ್ಪೋಕರ ಗ[ಂ]×ಯ್ಯನ ಅೞಿತಂ (ಸೌಇಇ. XI-i, ೨೪-೧೮ ; 897). [?]

**ಕೊಟ್ಮಿದುಳ್, ಕೊಳ್ಮಿದುಳ್, ಕೊಳ್ಮಿದುಳು, ಕೋಟ್ಮಿದುಳ್** (ನಾ). ಅಜಗಿಜಿಯಾದ ಮಿದುಳು ; ಜಜ್ಜಿದ ಮಿದುಳು : ಕೋಡ ಕೊಱೊಳಲ್ಲುಗುತಿರೆ ಕೊ[ಪಾಠಾಂ. ಕೋ]ಟ್ಮಿದುಳ್ಪರಿಸಿ ಮಸ್ತಕ ಪಿಂಡದ ಮೌಕ್ತಿಕೋತ್ಕರಂ (ಪಂರಾಮಾ. ೧೩-೪೪) ; ನೆತ್ತಿಯಿಂ ಕೊಟ್ಮಿದುಳ್ ಸಣಿಸಿ (ಜಗಪ. ೯-೮೩). **ಕೊಳ್ಮಿದುಳ್ :** ವೈರಿಮನ್ನೆಯರ ಕೊಳ್ಮಿದುಳಿಂ ಪೊಸಗಣ್ಣದಿಕ್ಕಿಯುಂ (ಎಕ. VIII, ಸೊರಬ. ೧೩೮-೩೯ ; ಸು. 1145). **ಕೊಳ್ಮಿದುಳು:** ಪೊಱಪೊಣ್ಮುವ ಕೊಳ್ಮಿದುಳು ಪೊದಳ್ದು ಸುರಿಗಾಗೆ (ಎಕ. VIII, ಸಾಗರ. ೧೫-೪೭ ; 1218). **ಕೋಟ್ಮಿದುಳ್ :** ಕೋಟ್ಮಿದುಳುಂ ಬರ್ಳಯ ಕೊಳೆಯುಂ ಸೂಸಿದುವು (ಪಂರಾಮಾ. ೧೧-೩೦); ಪೆಣದ ದೆಣಂದೆ ಕೋಟ್ಮಿದುಳ ಕೋಟ್ಕೆಸಱಿಲ್ಪನ ಪರ್ವತಂ (ಜಗಪ. ೭-೮೪); ಮುತ್ತುಗಳ್ಪರಸು ಸೂಸುವ ಕೋಟ್ಮಿದುಳಿಂ ದಿಶಾಮುಖಂ ಕಿಱಿಪೆಸೆದಿರ್ದ ಕೆಯ್ಗುಡಿಯ ಸಂದಣಿಯುಂ (ವರ್ಧಪು. ೭-೪೮); ಮಿಮಿಮಿಮಿಸುತಿರ್ಪ ಕೋಟ್ಮಿದುಳಿಂ (ಶೃಂಗಾರ. ೧-೮೯). [ಕೊಟ್ + ಮಿದುಳ್]

# ಕೋ

**ಕೋ₁** (ಕ್ರಿ). ೧. ಮಣಿ ಮೊದಲಾದುವುಗಳನ್ನು ನೂಲಿನಿಂದ ಏರಿಸು ; ಪೋಣಿಸು : "ಕೋ - ಸೂತ್ರಪ್ರವೇಶೇ (ಪೋಣಿಸು)" (ಶಮಧಾ) ; ಇಂದ್ರನೀಲಮಂ ಮುತ್ತುಮನೋಳಿಯೋಳಿಯೊಳ್ ಕೋದೆಡಲಿಕ್ಕಿದ ಮಾಲೆಯಂತೆವೋಲ್ (ಪಂಪಭಾ. ೧೧-೮೧) ; ಒಪ್ಪಮಂ ತಾಳ್ದಿದ ಮಕರಪತಾಕಾಳಿಯುಂ ಕೋದು ದೇವಾಯತನಂಗಳ್ . . . ರಂಜಿಸುತ್ತಿರ್ಪುವೆತ್ತಂ (ಕಾದಂಪೂ. ೨೯೬) ; ಮಾಲೆಗೋದವೋಲ್ ಸೊಗಯಿಪ ಪಂಚರತ್ನಘಟಮಾಲೆ ಪಳಂಚಲೆದತ್ತು (ಮಲ್ಲಿಪು ೧೨-೧೩೯); ಮುತ್ತಂ ಮುಟಿಸಂ ಕೋದಂತಿರೆ (ಕಾವ್ಯಾವ. ೫೫) ; ರುದ್ರಾಕ್ಷೆಗಳ ಕೋವ ವಿಮಲ ಶಿವಲಿಂಗಕ್ಕೆ ರುದ್ರಾಭಿಷೇಕಮಂ ಮಾಳ್ಪ (ಚಬಪು. ೩೪-೨೫). ೨. ಸಿಕ್ಕಿಸು ; ಸೇರಿಸು : ರಥದ ಕೀಲ್ ಮುಱಿದಾಗಳೆ ಕೈಯನಲ್ಲಿ ಕೋದೆಸಗುವ ಸೂತರ್ (ಪಂಪಭಾ. ೧೧-೬೫) ; ಕೊಲಲೊಲ್ಲದಂಗಪತಿ ದಿಲ್ಲೊಳೆ ಕೋದೆಳೆವಲ್ಲಿ ಗಂಡನಾಗನೆ (ಗದಾಯು. ೩-೨೭) ; ಪೊಸಪೊದೆ ಪೆಗಲೊಳ್ ಕೋದ ಕೋಬು ಬಡಿಕೋಲ್ . . . ದೇಸಿಯನೊದವಿಸಿ ನಡೆದತ್ತು ದೇಂಟಿಗಾಱರ ತಂಡಂ (ಸೂಕ್ತಿಸು. ೩-೧೦೨) ; ವಿವಿಧ ವಾದಕರೊಳಗದೊರ್ವನ ಹೆಗಲ ಹಱೆವೊಂದ ತವಕಿಸದೆ ತೆಗೆಕೊಂಡು ತನ್ನೊಳ್ಪುವ ಹೆಗಲಿನೊಳು ಕೋದು (ಸಾಳ್ವಭಾ. ೮-೫೫); ಬಳಿಕ ದೆನ್ನನು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು ಮಳೆಯ ದಿಲ್ಲಿನ ಹಾಗೆ (ಕನಪು. ೩೮-೧೩). ೩. ಚುಚ್ಚು ; ತಿವಿ ; ನಾಟಿಸು : ಅಡೆಯಂ ಕೋದ [ಪಾಠಾಂ. ಕೋ]ತ್ತುತುಂ ಮೂರ್ದಣಿಗೆ ಮುಸಗುತುಂ (ಲೀಲಾವ. ೫-೧೦೨) ; ತನ್ನೊಂದು ಕಾಯ್ಪುಂದರಿಯಂ ಕೋದೆತ್ತಿ ಕೋಡೊಳ್ ತಳರ್ಚುರ್ (ಸೂಕ್ತಿಸು. ೩-೩೫) ; ಹೊಳೆಹೊಳೆವ ಕೂರಂದಿನಲಿ ಕೋದನು ಗಜ ಮಸ್ತಕವ (ಕುವ್ಯಾದ್ರೋ. ೩-೭೪). ೪. ಕಟ್ಟು ; ಬಂಧಿಸು : ಪರಿಣ ಬಂಡಿಯಂ ಕಾಲಿಂ ಕೋವರು ಮಱಲಂ ಸರವಿ ಪೊಸೆವರು (ಸೌಇಇ. IX-i, ೨೮೬-೧೮ ; 1190) ; ಉನ್ನತದ ಪಾಶದಿಂದಂತಕಂ ಕೋದೆಳೆಯೆ(ಚಬಪು. ೫೧-೧೯). ೫. ಸಿಕ್ಕು ; ವಶವಾಗು : ತಳಾಱರ ಕೋಟೆಯ ಬಂದಿಯಲ್ಲಿ ಕಾಲ್ ಕೋದುದು (ಕಾವ್ಯಸಾ. ೧೨). ೬. ಸೇರಿಕೊಳ್ಳು ; ದಕೆಗೂಡು : ಅಂತಿಂತುಗಳ್ ಪದಾಪೂರಣದೊಳ್ ಕೋವುವು (ಶಮದ. ೩೧೮).

[ದೇ. ‖ ತಮಿ. ಮಲ. ಕೋ ; ಕೊಡ. ಕೊಯ ; ತೆಲು. ಕೋವ, ಕ್ರೊನ ; ಕೋಲಾ. ನಾಯ್ಕಿ. ಕೊಂಚ್ ; ಪರ್ಜಿ. ಕೋಪ್]

**ಕೋ₂** 'ಕೊಳ್₁' ನರಾ.

**ಕೋಂಟೆ, ಕೊಟ್ಟ₄, ಕೋಟೆ₁, ಕೋಟ್ಟ₂, ಕೋಟ್ಟೆ** (ನಾ) ಪೇಟೆಯ ಅಥವಾ ಪಟ್ಟಣದ ರಕ್ಷಣೆಗೋಸ್ಕರ ಕಟ್ಟಿದ ಭದ್ರವಾದ ಗೋಡೆಯ ಆವರಣ; ಎತ್ತರವೂ ಬಲವತ್ತರವೂ ಆದ ಸುತ್ತು ಗೋಡೆ; ಪುರಪ್ರಾಕಾರ; ಕಿಲ್ಲೆ; ದುರ್ಗ: ಪೊಬಲ ಪಡುವಣ ದೆಸೆಯ ಕೋಂಟೆಯ ಪೊಱಗಣ ದೆಸೆಯೊಳ್ (ವಡ್ಡಾರಾ. ೧೩೪–೧೬); ಕೋಂಟೆಯ ಚೆಲ್ವು ಪೊಗೞಲಱಿದೆನಿಸಿರೆ ನೆಗೆದುದು ನಭಮನೆಯ್ದೆ ಮಿಳಿರ್ವ ಪತಾಕಾವಳಿ (ಪಂಪಭಾ. ೪–೧೦); ಭಯದಿಂದಂಜನಚೋರಂ ಪದಕಮನೀಡಾಡಿಯಾ ಪುರದ ಕೋಂಟೆಯಂ ವಿದ್ಯಾಧರಕರಣದಿ ಲಂಘಿಸಿ (ಧರ್ಮಾಮೃ. ೨–೧೨೬); ಮುಗಿಲ್ವ ಸಲೆ ವಿಸ್ತಾರದಿಂ ನೋಡಲಾ ನಗರದ ಕೋಂಟೆಯೊಪ್ಪುವುದು (ಜೀವಂಸಾಂ. ೧–೩೪). **ಕೊಟ್ಟ₄**: ಪರಿತಂದು ಪೊಕ್ಕಱಸುವೊಡೆನ್ನ ದೀಡು ಕೊಟ್ಟವಲ್ಲುದು (ಧರ್ಮಾಮೃ. ೬–೧೧೬); ನೀನೆಮಗೀಗ ಪಟ್ಟವ ಕಟ್ಟಿ ಸಾಗಿದರೆ ಕೊಟ್ಟವ ಮಾಡಿ ನಿಮ್ಮವರು ಬಾಗಿಲ ಹಾಕಿ ಇಟ್ಟು ಕೊಲ್ಲರೆ ಗುಂಡಿನೊಳಗೆ (ಹರಿಸಾಂ. ೨–೧೦೪); ಗಿರಿಕುಹರ ಕೊಟ್ಟ ಗಂಹರಗಳಲಿ ಕೋಹಿನಲಿ ಹಿರಿದು ಸೋಲಿಸಿ . . . ಹಿರಣ್ಯಯಕೆ ಬಂದು ದಿಟ್ಟರು ಪಾಳ್ಯಮಂ (ತುರಂಗ. ೧೯–೨೨). **ಕೋಟೆ₁**: ಕೊಲ್ಲಿಪಲ್ಲವ ಸೊಭಮ್ಮಂ ವ್ಯೊಬಮ್ಮರಾದಿತ್ಯನನ್ವೆಸಸಲಾ ಕಾಳರಾಸರುವೆಟ್ಟು ಪೆರ್ಗುಣಜಿಯ ಕೋಟೆಯಾನ್ ರೋಹಿಸಿದಿಟ್ಟು (ಎಕ. VIII. ಸೊರಬ. ೧೦–೪; 800); ಇರ್ಕೆಯ ಕೋಟೆಯೊಪ್ಪಿರೆ ನೆಗಟ್ತೆಯ ಸ್ವರ್ಗಂ (ಧರ್ಮಾಮೃ. ೩–೨೩೧); ತ್ರಿಪುರದ ಕೋಟೆ ಬಲ್ಲಿತ್ತೆಂದರೆ ನೊಸಲಕಂಗಳಲುರುಹಿದನವ್ವಾ (ಮಹಾದೇ. ೧೫–೩); ಕೈಮಾಡಿ ಕೊಂಡರು ಸುದರ ಕೋಟೆಗಳ (ಕುಮಾರವ್ಯಾ. ೧–೫೨). ‘ಕೋಟೆಗಾಳೆಗ’ ಪರಾ. **ಕೋಟ್ಟೆ**: “ಕೋಟೆ (ಕೋಂಟೆ, ಕೊಟ್ಟ) – ಕೋಟ್ಟೆ, ಕೋಟೆ” (ತದ್ಭಕೋ. ೯). **ಕೋಟ್ಟೆ**: ಮಹಾರಾಜರುಂ ಬಾಣರಸರುಂ ಸೋರೆಮಟ್ಟ ಕೋಟ್ಟಂ ಯಿಟ್ಟಲ್ಲಿ (ಎಇ. XXIV, ೨೬–೫; 885).

**ಕೋಂಟೆಕೊತ್ತಲ** = ಕೋಟೆ ಮತ್ತು ಅದರ ಮೇಲಿರುವ ಬುರುಜು: ಕೋಂಟೆಕೊತ್ತಲಗಳನ್ನು ಹೊಸಹೊಸ ಭದ್ರತೆಗಳ ಭ್ರಾಂತಿಯಿಂದ ಜೀರ್ಣೋದ್ಧಾರಮಾಡಿಕೊಳ್ಳುತ್ತ (ಮಂತ್ರಶ. ೬೯).

[ದೇ. ‖ ತಮಿ. ಕೋಟ್ಟೈ; ಮಲ. ಕೋಟ್ಟ; ತುಳು. ಕೊಡ. ಕೋಟೆ; ತೆಲು. ಕೋಟ. / ಸಂ. ಕೋಟ]

**ಕೋಂಟೆಕಾಳಗ** ‘ಕೋಂಟೆ ಗಾಳೆಗ’ ನೋ.

**ಕೋಂಟೆಕಾಱ, ಕೋಟೆಗಾಱ** (ನಾ). ಕೋಟೆಯ ರಕ್ಷಕ. ‘ದಿಗಂಗೋಂಟೆಕಾಱ’ ಪರಾ. ಕೋಟೆಗಾಱ: ಬೇಡ ಕೋಟೆಗಾಱರನು ತರಲಾಗದು (ಸೌಇಎ. ೧೯೩೧, ಮಂಗಳೂರು. ೩೩೬–೯; 1450).

[ಕೋಂಟೆ + -ಕಾಱ]

**ಕೋಂಟೆಕೋಲಾಹಲ, ಕೋಟೆಕೋಲಾಹಲ, ಕೋಟೆಕೋಳಾಹಳ** (ನಾ). ೧. ಶತ್ರುವಿನ ಕೋಟೆಯಲ್ಲಿ ಕೋಲಾಹಲವನ್ನು ಎಬ್ಬಿಸುವವನು; ಒಂದು ಬಿರುದು: ಕೋಂಟೆಕೋಲಾಹಲನೆನಿಪೀ ಬಿರುದನಾಂತು ರಾರಾಜಿಸಿದಂ (ಕಳನ್ಯ. ೨–೨೨). ಕೋಟೆಕೋಲಾಹಲ: ೦. ಪ್ರತ್ಯರ್ಥಿಧರಣೀಪಾಲ ಕೋಟೆಕೋಲಾಹಲಾಭಿಧಃ (ಎಕ. VII, ಶಿವಮೊ. ೨–೩೦; 1641). ೨. ಕಂಠೀರವ ನರಸರಾಜೇಂದ್ರನ ಸೈನ್ಯದಲ್ಲಿದ್ದ ಒಂದು ಕೋವಿಯ ಹೆಸರು: ಕೋಟೆಕೋಲಾಹಲ ಕಲಿವೀರಭದ್ರನು ಲೂಟಿಯ- ಕಣಭೈರವನು ವಿರಾಟನ ರಂಗನಾಥನು ವೈರಿಭಟಕುರುಪಟವ ಬಲುಗೋವಿಯುಹುವು (ಕಂನಕಿ ೬–೧೯). **ಕೋಟೆಕೋಳಾಹಳ**: ೧. ಶ್ರೀಮದ್ದೆಡವ ಮುರಾರಿ ಕೋಟೆಕೋಳಾಹಳ (ಸೌಇಎ. ೧೯೪೩, ೩೧೫; ಸು. 1545); ಶ್ರೀಮದ್ದೆಡವ ಮುರಾರಿ ಕೋಟೆಕೋಳಾಹಳ . . . ಶಿವಗುರು ಭಕ್ತಿ ಪಾರಾಯಣ (ಎಕ. VII, ಶಿವಮೊ. ೨೮–೬; 1670).

[ಕೋಂಟೆ + ಕೋಲಾಹಲ]

**ಕೋಂಟೆಗಾವಲ್, ಕೋಟೆಗಾವಲ್** (ನಾ). ಕೋಟೆಯ ಕಾವಲು, —ಕಾಪು; ದುರ್ಗರಕ್ಷಣೆ: ಪುರತ್ರಯದ ಕೋಂಟೆಗಾವಲ ಪಟುಭಟರ್ ಜತನವೆಂದು ನೇಮಿಸಿ (ಚಬಪು. ೪೨–೯). **ಕೋಟೆಗಾವಲ್**: ಕೋಟೆಗಾವಲ ಭಟರ ವಿವಿಧಾಯುಧಂಗಳ (ಜೈಮಿಭಾ. ೧೬–೯).

[ಕೋಂಟೆ + ಕಾವಲ್₁]

**ಕೋಂಟೆಗಾಳಗ** ‘ಕೋಂಟೆಗಾಳೆಗ’ ನೋ.

**ಕೋಂಟೆಗಾಳೆಗ, ಕೋಂಟೆಕಾಳಗ, ಕೋಂಟೆಗಾಳಗ, ಕೋಟೆಗಾಳಗ, ಕೋಟೆಗಾಳೆಗ** (ನಾ). ಕೋಟೆಯ ಕಾಳೆಗ, —ಯುದ್ಧ: ಲಗ್ಗೆಯೊಟ್ಟಿಳದೊಟ್ಟಿಳವಾದುದು ಕೋಂಟೆಗಾಳೆ [ಪಾಠಾಂ. ಳ]ಗಂ (ಚಂದ್ರಪ. ೫–೧೦೫); ಕಂಡರಾ ಸಮಯದೊಳ್ ಖಳರು ಗಜಬಜಿಸುವಾ ಖಂಡಳಾದ್ಯರ್ ಕೋಂಟೆ[ಪಾಠಾಂ. ಕೋಟೆ]ಗಾಳೆಗವಱೀಗ ಕೈಕೊಂಡರ್ (ಚಬಪು. ೪೨–೨೫). **ಕೋಂಟೆಕಾಳಗ**: ಅಸುರಮಾದುದು ಕೋಂಟೆಕಾಳಗಂ (ತ್ರಿಷಪು. ೫–೯). **ಕೋಂಟೆಗಾಳಗ**: ಕವಿದಿಸುವಂಬು ವಾರ್ದಿಸುವ ಕಕ್ಕಡೆ ಕುತ್ತುವ ಕೊಂತ . . . ಲಗ್ಗೆಮಾಡುವ ಭಟಕೋಟೆ ಕೋಟಲೆಯನಾಳ್ದಿರೆ ನೀಳ್ದುದು ಕೋಂಟೆಗಾಳಗಂ (ಪುಷ್ಪಪು. ೬–೬೪). **ಕೋಟೆಗಾಳಗ**: ಕೋಟೆಗಾಳಗದ ಪ್ರತಿಯೊಂದು ಅಂಗವನ್ನೂ ಕಣ್ಣಿಗೆ ಕಟ್ಟುವಂತೆ ಸಂಪೂರ್ಣವಾಗಿ ಚಿತ್ರಿಸಿದವನೆಂದರೆ ವಿರೂಪಾಕ್ಷ ಪಂಡಿತನು ಒಬ್ಬನೇ ಒಬ್ಬ ಎಂದು ಹೇಳಬಹುದು (ಕರ್ನಾಜ. ೪೬). **ಕೋಟೆಗಾಳೆಗ**: ರಸವಾದಿಯಂತೆ ಕೊಲ್ಲಿಸುತ್ತುಂ . . . ಕೋಟೆಗಾಳೆಗದಂತೆ ಪತ್ತೆಸುತ್ತುಂ (ಧರ್ಮಾಮೃ. ೨–೬೧). [ಕೋಂಟೆ + ಕಾಳೆಗ]

**ಕೋಂಟೆವಱೆ** (ನಾ). ಕೋಟೆಯಲ್ಲಿ ಬಾರಿಸುವ ಒಂದು ಬಗೆಯ ಚರ್ಮವಾದ್ಯ, —ನಗಾರಿ: ಬಿಡದೆ ಕೂಗುವ ಪಹರೆ ತಿರುಗುತಿಹ ಪಂಜುಗಳ್ ಗಡಬಡಿಪ ಕೋಂಟೆವಱೆ ದನಿಗೆಯ್ವ ಪಟಲುಗಳ್ (ಚಬಪು. ೪೨–೧೦). [ಕೋಂಟೆ + ಪಱೆ₁]

**ಕೋಕ₁** (ನಾ). ೧. ಜಕ್ಕವಕ್ಕಿ; ಚಕ್ರವಾಕ: “ಕೋಕಃ, ಚಕ್ರಃ, ಚಕ್ರವಾಕಃ, ರಥಾಂಗಃ – ಈ ೪ ಜಕ್ಕವಕ್ಕಿ” (ಹಲಾಯು. ೪೧–೯೧); ಕೋಕಂ ಕೋಕಂ ಪಡೆಯೆ . . . ರಂಜಿಸಿತಿರುಳ್ (ಪುಷ್ಪಪು. ೮–೧೩); ವಿರಹಂ ಕೋಕಂಗಳೊಳ್ (ಚಕಕು. ೬–೪); ಅಲ್ಲಲ್ಲಿ ಕರಂ ನಿಂದು ನೆನೆದು ಪುಯ್ಯುದು ಕೋಕಂ (ರಾಜಶೇ. ೧೧–೧೬). ೨. ತೋಳ; ಈಹಾಮೃಗ: “ಅರಣ್ಯಶ್ವಾ, ಕೋಕಃ, ಈಹಾಮೃಗಃ, ವೃಕಃ – ಈ ೪ ತೋಳಂ” (ಹಲಾಯು. ೩೮–೬೫); ಬಲೆ ಪಱಿವ ಕೋಕನಂಕೊರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು (ಪಂಪಭಾ. ೫–೯೩ ವ). ೩. ಕೋಗಿಲೆ; ಪಿಕ: ಕುಕಿಲ್ವ ನಲಿವ ಕೋಕದಿಂ (ಪಂಪಭಾ. ೧–೫೮). ೪. ಕಪ್ಪೆ; ಭೇಕ. ೫. ಖರ್ಜೂರದ ಮರ. ೬. ಹಲ್ಲಿ; ಗೌಳಿ. ೭. ಮರ; ವೃಕ್ಷ. ೮. ಶ್ರೇಷ್ಠ; ಉತ್ತಮವಾದುದು. ೯. ಕಾಮಶಾಸ್ತ್ರವನ್ನು ಬರೆದ ಒಬ್ಬ ಪಂಡಿತನ ಹೆಸರು. ‘ಕಕ್ಕೋಕ’, ‘ಕೋಕಶಾಸ್ತ್ರ’ ಪರಾ. “ಕ್ಷಿತಿಜದೊಳು ಖರ್ಜೂರದೊಳು ಕೋಕನೊಳು ಭೇಕತತಿಯೊಳು, ರಥಾಂಗದೊಳು ಜ್ಯೇಷ್ಠಯೊಳು ಕೋಕಮಕ್ಕು” (ಮಂಗರಾ. ೧೫೨–೫೮); “ತರುಖರ್ಜೂರವನಶ್ವ ಚಕ್ರಯುಗಭೇಕಂ ಶ್ರೇಷ್ಠಮುಂ ಕೋಕಮಕ್ಕು” (ನಾನಾರ. ೧೨೯). [ಸಂ.]

(ನಾ). ಒಳಗಿನ ತೆಳು ಪದರ ಅಂಟಿಕೊಂಡಿರುವ ಅಡಕೆ; ಕೇಳುಅಡಕೆ: ಗೋಟಡಿಕೆಗಿಂತ ಕೋಕಕ್ಕೆ ಬೆಲೆ ಕಡಿಮೆ (ರೂಢಿ).

[← ಮರಾ. ಖೋಕಾ, ಖೋಖಾ]

**ಕೋಕಕಟ್ಟಳೆ** (ನಾ). ಕಕ್ಕೋಕಶಾಸ್ತ್ರದ ನಿಯಮ; ಕಾಮಶಾಸ್ತ್ರದ ಸೂತ್ರ: ಎಲ್ಲಿ ನೋಡಲು ಭರತ ಕೋಕಕಟ್ಟಳೆಗಳನು ಸೊಲ್ಲಿಸುವ ಬೆಲೆವೆಣ್ಗಳು (ಪ್ರೌಢರಾ. ೬-೮). [ಕೋಕ$_1$ + ಕಟ್ಟಳೆ]

**ಕೋಕನದ** (ನಾ). ಕೆಂಪುತಾವರೆ; ಕೆಂದಾವರೆ: "ಅರುಣಾಬ್ಜಮೆನೆ ಕೋಕನದಮೆನಲ್ ಕೆಂಪುದಾವರೆಯಕ್ಕು" (ಮಂಗರಾ. ೧೨೪-೧೬); ಆ ಕಾಂತೆಯ ಮೃದುತಳ ಪದ ಕೋಕನದಂ ತನ್ನ ರುಚಿಯಿನೊದವಿಸಿ ರಾಗೋದ್ರೇಕಮಂ (ಮಲ್ಲಿಪು. ೬-೫೭); ರತ್ನರಾಜಿ ಶೋಣಾದ್ರಿಗೆ ಪೂಗೊಳಕ್ಕೆ ನವಕೋಕನದಂ (ಉದ್ಭಟ. ೧-೪೬). [ಸಂ.]

**ಕೋಕನದಗರ್ಭ** (ನಾ). ತಾವರೆಯಲ್ಲಿ ಹುಟ್ಟಿದವನು; ಬ್ರಹ್ಮ: ಕೋಕನದಗರ್ಭನಿಂ ವಾಲ್ಮೀಕಿಯ ಕವಿ ಮುನಿನಿಕಾಯದೊಳ್ (ಜಗವಿ. ೧-೭). [ಕೋಕನದ + ಗರ್ಭ]

**ಕೋಕನದಜಠರ** (ನಾ). ಹೊಟ್ಟೆಯ ಮೇಲೆ ತಾವರೆಯನ್ನುಳ್ಳವನು; ವಿಷ್ಣು: ಕೋಕನದಜಠರನಂ ನಿರ್ವಾಣಕುಳಮಿಂತೆಂದು ಧರ್ಮತನಯಂ ನುಡಿದಂ (ಪಂಪಭಾ. ೯-೧೪). [ಕೋಕನದ + ಜಠರ]

**ಕೋಕನದಪ್ರದ್ವಿಷ** (ನಾ).= ಕೋಕನದ ವೈರಿ ೧: ದಿನನಾಥಾಲಯ ಲಗ್ನದೊಳ್ ಕುಜಬಾಧತ್ರಿಂಶಾಂಶಮಾದಂದು ಕೋಕನದ ಪ್ರದ್ವಿಷನಲ್ಲಿ ಕೂಡೆ ಪುರುಷಾಚಾರಾಢ್ಯ (ಜಾತಕ. ೨೨-೭). [<ಸಂ. ಕೋಕನದಪ್ರದ್ವಿಷ್]

**ಕೋಕನದವೈರಿ** (ನಾ). ೧. ಕೆಂದಾವರೆಯ ಶತ್ರು; ಚಂದ್ರ: (ಕ). ೨. [ಛಂದ] ಒಂದು ಅಕ್ಷರಗಣ; ಭಗಣ: ಕೋಕನದ ವೈರಿ ದಿನಪಂಗಾ ಕಡೆಗೆ ವಾಯು ಬರೆ ಕೇಳಾ ಕಮಲಲೋಚನೆ ಪೆಸರ್ ಸಾಕಿಗನಿನಾದುದುದಯಂ (ಛಂದೋಂಬು. ೨-೫೦) [ಕೋಕನದ + ವೈರಿ]

**ಕೋಕಮ** (ನಾ). ಒಂದು ಬಗೆಯ ಹುಳಿ ಹಣ್ಣು; ಆಮಸೋಲು; ಉಂಡೆಹುಳಿ (ಕರಾ): ಮುಂಬಯಿ ೨೮ ಮಣದ ಖಂಡಗದ . . . ಜೀನಸುಗಳು ೧. ಆಮಸೂಲ (ಕೋಕಮ); ೨ ಕವಡಿ (ಮುಂಬವ್ಯಾ. ೧೨೧).
[← ಮರಾ. ಕೋಕಮ್]

**ಕೋಕರ** (ನಾ). ಒಬ್ಬಾತನ ಹೆಸರು: ಬಳಗಾಜರ ಕೋಕರಂ ಪುನುವಲವಳ್ಳಿಯಲಿಟ್ಟು ಪುಯ್ಯಲಂ ಪರಿದು ಮಾರ್ಬಲಮಂ ಕಲ್ತಿಜಾದು ಸ್ವರ್ಗಾಲಯಕ್ಕೆ ಸನ್ದಂ (ಎಕ. VIII, ಸೊರಬ. ೫೩೦-೫; 979). [?]

**ಕೋಕಶಾಸ್ತ್ರ** (ನಾ). ಕೋಕನೆಂಬ ವಿದ್ವಾಂಸನಿಂದ ರಚಿಸಲ್ಪಟ್ಟಿತೆಂದು ನಂಬಲಾದ ಶಾಸ್ತ್ರ; ಕಾಮಶಾಸ್ತ್ರ: (ಕ).
[ಕೋಕ$_1$ + ಶಾಸ್ತ್ರ]

**ಕೋಕಿ** (ನಾ). ಹೆಣ್ಣು ಚಕ್ರವಾಕ ಪಕ್ಷಿ: ಹೆಣ್ಣು ಜಕ್ಕವಕ್ಕಿ: ಕುಜೆಯುಲೊಲ್ಲದು ಸವಿಲ್ ಬೆರೆಯಲೊಲ್ಲವು ಕೋಕಿ (ಜೈಮಿಭಾ. ೧೯-೩೩); ಕೋಗಿಲೆ ಗಿಡಗ ಕೋಕಿಗಳ್ ಕದ್ಬಾರೆ ಹದ್ದು ಪೆಣ್ಬಂಟೆ (ಸಿದ್ಧರಾ. ೬-೩೩); ಶಿವನ ಊರುಪಂಡದಿಂದಾದ ದಾಳೆಗಳು, ಹರನ ಕರನಖದಿಂದಾದ ಕೋಕಿಗಳು (ಶರಚ. ೨೮). [ಸಂ. ಕೋಕೀ]

**ಕೋಕಿಲ, ಕೋಕಿಳ** (ನಾ). ಕೋಗಿಲೆ; ಪರಪುಟ್ಟ; ಪಿಕ: "ಪಡಿಯಜವಕ್ಕಿಯೆನಲ್ಕೆ ಕೋಕಿಲನಕ್ಕುಂ" (ರನ್ನಕಂ. ೬); ಬಿರಯಿಯಂ ಮತ್ತಾಳಿನೀ ಕೋಕಿಲ ಧ್ವನಿಯಿಂದಂಜಿಸುತುಂ (ಕಾದಂಬ. ೭೮೧); ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುತ್ಕಕೀರ ಮದ ಕೋಕಿಲ ಗರ್ಜಿತ ತರ್ಜಿತಂಗಳಿಂ (ಅಜಿಪು. ೬-೨೩); ಕೋಕಿಲಂ ಕೊನೆವೆಂ ಕರ್ಚಿ ಕೊಹಳ್ ಸರಂಗೆಡೆದುದು (ಅನಂಪು. ೬-೭೨); ಕೋಕಿಲಂಗಳ್ ಕೊರಲ್ಲೆಬಪು ಮಾಡೆ (ಭಾವಚಿಂ. ೪-೧೬). **ಕೋಕಿಳ**: "ಪಿಕಂ ಕೋಕಿಳಂ ಕಳಕಂಠಮನ್ಯಭೃತಪುಸ್ಕಪುಷ್ಪಂ ಕೋಗಿಲೆಯೆಂದೆನಿಕ್ಕುಂ" (ಮಂಗರಾ. ೫೦-೩); ವಕ್ರವಾಕ್ಯಂ ಕೋಕಿಳಂಗಳೊಳಲ್ಲದೆ . . . ಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ಕೋಕಿಲತಂತ್ರ** (ನಾ). (ಕೋಕಿಲೆಯಂತೆ) ತನ್ನ ವಸ್ತುವನ್ನು ಹೆರವರು ಕಾಪಿಡುವಂತೆ ಮಾಡುವ ಯುಕ್ತಿ, —ಚಮತ್ಕಾರ: ಶ್ರೀನಿವಾಸಮೂರ್ತಿಗಳು ಗ್ರಂಥಲೇಖನಕ್ಕೆ ಮೊದಲು ಮಾಡಿದ ಕಾಲದಲ್ಲಿ ಕೋಕಿಲತಂತ್ರ ಕನ್ನಡ ಸಾಹಿತ್ಯ ಲೋಕದಲ್ಲಿ ಇನ್ನೂ ಮೊದಲಾಗಿರಲಿಲ್ಲ (ಮಹಾಗ. i, ಪ್ರಸ್ತಾವನೆ.). [ಕೋಕಿಲ + ತಂತ್ರ]

**ಕೋಕಿಲನಿನದ** (ನಾ). ಕೋಗಿಲೆಯ ಧ್ವನಿ, —ಇಂಚರ: "ಪುಗಿಲ್ ಪುಗಿಲೆನಿಪಾರಾವರ ಕೋಕಿಲನಿನದಂ" (ಚತುರಾ. ೯೫).
[ಕೋಕಿಲ + ನಿನದ]

**ಕೋಕಿಲಪ್ರಿಯ** (ನಾ). [ಸಂಗೀತ] ಒಂದು ತಾಳದ ಹೆಸರು: ಅವುಗಳೊಳು ಚಂಚತ್ಪುಟ . . . ಕೋಕಿಲಪ್ರಿಯ . . . ಜಯಾಳವೆಂಬಿವು ಮೊದಲಾದ ನೂಜಂಟು ತಾಳಂಗಳುಂ (ವಿವೇಕ. ೨೩೫).
[ಕೋಕಿಲ + ಪ್ರಿಯ]

**ಕೋಕಿಲಸ್ವನ** (ನಾ). = ಕೋಕಿಲನಿನದ: ಅನುಲೇಪಾತಿಶಯಪ್ರಭಾವದಿನಿತಾಂಗೋಪಾಂಗಮುಕ್ಕೋಕಿಲಸ್ವನ ಲೀಲಾ ಅಲಿಕೋಟಿ ಚಾರುನಿನದಂ (ಸುಕುಮಾ. ೫-೩೬). [ಕೋಕಿಲ + ಸ್ವನ]

**ಕೋಕಿಲಾಕ್ಷ** (ನಾ). ಕೊಳಗುಳಕೆ ಗಿಡ; ಇಕ್ಷುಗಂಧೆ: "ಇಕ್ಷುಗಂಧಾ, ಕಾಂಡೇಕ್ಷುಃ, ಕೋಕಿಲಾಕ್ಷಃ, ಇಕ್ಷುರಃ, ಕ್ಷುರಃ —ಈ ಐದೊಳವಂಕೆ ಹೆಸರುಗಳು." (ಸಿದ್ಧಾಂಕ. ೧೧೯). [ಸಂ.]

**ಕೋಕಿಲಾರವ** (ನಾ).= ಕೋಕಿಲನಿನದ: ಕೋಕಿಲಾರವಮದು ಬೀರ ಮದ್ದಳೆಯ ನಿಸ್ವನಮಾಗಿರೆ (ಚಂದ್ರಪು. ೭-೪೨). [ಕೋಕಿಲ + ಆರವ]

**ಕೋಕಿಲಾಸನ** (ನಾ). [ಯೋಗ] ಆಸನಗಳಲ್ಲೊಂದು: ಮುಖ್ಯವಾದ ಕೆಲವು ಆಸನಗಳು — ೧. ಉತ್ತಾನಾಸನ . . . ೪೬. ಕೋಕಿಲಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಭಾರದ. ೧೬೭).
[ಕೋಕಿಲ + ಆಸನ]

**ಕೋಕಿಲೆ** (ನಾ). = ಕೋಕಿಲ: "ವನಪ್ರಿಯಃ, ಪರಭೃತಃ, ಕೋಕಿಲಃ, ಪಿಕಃ —ಈ ೪ ಕೋಕಿಲೆ" (ನಾಚಿರಾ. ೧೧೪). [ಸಂ. ಕೋಕಿಲ]

**ಕೋಕಿಳ** 'ಕೋಕಿಲ' ನೋ.

**ಕೋಕಿಹಾರಿಕೆ** (ನಾ). (?): ಕೈಯಣ ಗಿಂಡಿಯು ಕೊಂಕುಳ ಪೆಟ್ಟಿಗೆ ಕಲ್ಲಿಯುಹುಡಿ ತಲಕಟ್ಟು ಬಯ್ಕಗಳೆಂಬವು ಪರಿಪರಿ ನೋಡಲು ಕೋಕಿಹಾರಿಕೆ ಅಳವಟ್ಟು ಜ್ಞಾನವು ಇಲ್ಲವು ಪ್ರಸ್ತದ ಮನೆಯೊಳು ಹೋಳಿಗೆ ತುಪ್ಪವು ಗದಿಕು ಧ್ಯಾನವಿಲ್ಲವು ಮೌನವಿಲ್ಲವು ಯಮನ ಕೈಯಿಂದಾ ಮುಟುಕು (ಚಿದಾಕೋ. ೪೨-೪). [?]

**ಕೋಕೋ** (ನಾ). ೧. ಪಾನೀಯ ಮೊದಲಾದುವುಗಳಿಗೆ ಉಪಯೋಗವಾಗುವ ಬೀಜಗಳನ್ನು ಕೊಡುವ ಒಂದು ಜಾತಿಯ ಗಿಡ. ೨. ಕೋಕೋ ಬೀಜದಿಂದ ಮಾಡಿದ ಪಾನೀಯ: ಕಾಫಿಗೆ ಬದಲು ಕೋಕೋ ಕುಡಿದು (ರೂಢಿ). [← ಇಂ. Cocoa]

**ಕೋಗಳಿ, ಕೊಂಗಳ್ಳಿ, ಕೊಗಳಿ, ಕೊಗಳೆ, ಕೊಗೆಟು, ಕೊಗುಳಿ** (ನಾ). ಒಂದು ಸೀಮೆಯ ಹೆಸರು. IP ಈಗಿನ ಬಳ್ಳಾರಿ ಜಿಲ್ಲೆಯ ಕೋಗಳಿ: ಶ್ರೀಮತ್[ಕೇ] × [ಶ]ಸ್ಮಂ ಬಲ್ಲಹನ ದಯೆ[ಯಿಂ] [ಕೋಗ]ಳಿಯಾಯ್ನೂರುಮಂ ಮಾಸಿಯವಾಡಿ[ನೂಱ]ನಾಲ್ವತ್ತುಮನಾಳುತ್ತಮಿರ್ದು (ಸೌಇಇ. XI-i, ೨೨-೭; 897); ಸ್ವಸ್ತಿ ಶ್ರೀಮತು ನಾಲ್ಕು ಯುಗದ ಪೊಳಲು ಕೋಗಳಿಯ ಚಕ್ರ ಕಾ × × × (ಸೌಇಇ. XI-i, ೦೬-೫೦; 1030); ನೊಳಂಬವಾಡಿ ಮೂವತ್ತಿಚ್ಛಾಸಿರಕ್ಕಂ ಸಿಖಾಮಣಿಯೆನ್ನಿಪ್ಪುಂ ಕೋಗಳಿಯಯ್ನೂಱಕಂ ಮೊದಲೆನ್ನೆ ನೆಗಳ್ದ ರಾಜಧಾನಿ ಪಟ್ಟಣಂಗಳ ಚಕ್ರವರ್ತ್ತಿ ಕೋಗಳಿಯ ಪೆರ್ಮ್ಮೆಯೆಂತೆಂದಡೆ (ಸೌಇಇ. IX-i, ೩೧೭-೨೭; 13ನೆಯ ಶತ).

**ಕೊಂಗಳ್ಗೆ** : ಕೊಂಗಳಯ್ಯುಂಬಂ ಕದಂಬಳಿಗೆ ಸಾಸಿರಮುಂ ಬಲ್ಲಕುನ್ದ ಮೂನೂಱುಂ (ಎಕ. XI, ದಾವಣ. ೨೦–೪; 1045). **ಕೊಗಳಿ** : ಕೊಗ[ಪಾ ಶಾ ೦. ಗು]ಳಿಯನಾಳ್ವ ಕ್ರಾಂಚನೆಂಬರಸಂಗೆ (ವಡ್ಡಾರಾ. ೧೧೬–೧೫); ಇಮ್ಮಡಿ ನೊಳಂಬಂ ಬಲ್ಲಕುಂದೆ ೩೦೦ ಕೊಗಳಿ ೫೦೦ ಕದಂಬಳಿಂಗೆ ಸಾಸಿರವುಮನಾಳುತ್ತಮಿರೆ (ಎಕ. XI, ದಾವಣ. ೧೯–೪; 1043). **ಕೊಗಳೆ** : ಈಶಾನ್ಯ ಕೊಗಳೆಯ ಹಾಳ ಹೊಲವೇರೆಯ ಹಳ್ಳದಿಂ (ಸೌಇಇ. IX–i, ೨೨೮–೧೫; 1133). **ಕೊಗಲಿ** : ಪಡೆವೋಗಿ ಕೊಯತ್ತೂರಿಱದಲ್ಲಿ ಕೊಗಲಿಯ ಒಕ್ಕಲ್ ಶ್ರೀಎಮ್ಮೆಯರ ಮಗ ಬೊಲ್ಲಗಂಗ ಗಾಮುಣ್ಡ ಸಿಱಿದು ಪಟ್ಟನ್ (ಎಕ. X, ಬಾಂಗ್. ೧೩–೪; 890). **ಕೊಗುಳಿ** : ಮೇಲಿನ 'ವಡ್ಡಾರಾ.' ಪ್ರಯೋಗದ ಪಾಠಾಂತರವನ್ನು ನೋಡಿ.

**ಕೋಗಳಿ ಗಡಿಂಬ** = ಕೋಗಳಿಯ ಸುತ್ತಮುತ್ತ ಪ್ರಚಾರದಲ್ಲಿದ್ದ ಒಂದು ಅಳತೆಗೋಲು : ಬಡಗಲು ಕೋಗಳಿಗಡಿಂಬದ ಉತ್ಕೃಷ್ಟವಪ್ಪರೆಯ (ಸೌಇಇ. IX–i, ೨೪೮–೨೪; 1147). [?]

**ಕೋಗಿಯೂರ್** (ನಾ). ಒಂದು ಊರಿನ ಹೆಸರು : ಕೋಗಿಯೂರ ಬಯಲೊಳ್ಪಾಳ್ಗೆಟ್ಟು ಕೊಣ್ಡಯ್ದುದಂ (ಎಕ. XIV, ಎಡತೊ. ೩೧–೮; 908).
[ಕೋಗಿ ? + ಊರ್]

**ಕೋಗಿರು** 'ಕೋಗೀರು' ನೋ.

**ಕೋಗಿಲು** 'ಕೋಗಿಲೆ' ನೋ.

**ಕೋಗಿಲೆ, ಕೋಗಿಲು** (ನಾ). ೧. = ಕೋಕಿಲ: "ಪಾಮ್ರಾಕ್ಷಃ – ಕೋಗಿಲೆ" (ಒಷಧಿ. ೩೭); ಕೋಗಿಲೆ ಬಾದಗೆ ಪೋದಗೆ ಮೂಗಿಗಲಿಂ ಪಂಚಿಕೊಂಚಿ . . . ಬಲಾಕೆ ಲಾವುಗೆ ಸೇನಂ (ಕಾವ್ಯಸಾ.೧೦೪೪ ಕ್ಷುದ್ರಕ); ಮಾವಿನಂಕುರಮನೆ ಕರ್ಚಿ ದಿಕ್ಪಟಿಪ ಕೋಗಿಲೆ (ಪಂಪಭಾ. ೫–೧೧); ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ಕೊಱೆದಯ್ದೆ ವೈರಮಂ (ಧರ್ಮಾಮೃ. ೩–೯೦); ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ (ತೊರರಾ. ೧–೯–೧೧); ಕಾಗೆ ಕರಿದಾದರೆ ಕೋಗಿಲೆ ಅದೀತೆ (ಗಾದೆ). ೨. ಒಂದು ಜಾತಿಯ ಹುಳು : ಕಟಿಯ ಬಾಟುಕಮುದುನುಚ್ಛ್ವಳ ಲವಣಸಮೇತಮಿಕ್ಕು ಸುಂಠಿಯುನರೆದಾಗಳೆ ನಸ್ಯಾಂಜನವಿಧಿಯಿಂದಲೆಗುಂ ಕೋಗಿಲೆಯನಡಸಿ ಮಲ್ಲಾ ವಿಷಮಂ (ಅಶ್ವಶಾ. ೧೧–೩೪); ಕೋಗಿಲೆಯಂ ತಿಂದ ಕುದುರೆ ಮೇಲುಸುರಣಿಕ್ಕುವುದು (ಅಶ್ವವೈ. ೧೨–೨೦ ಟೀಕು). ೩. ಜಾನುವಾರುಗಳಿಗೆ ಬರುವ ಒಂದು ಬಗೆಯ ರೋಗ : ನೆರೆ ಪಟ್ಟಿಯುತುಪ್ಪಮು ಮಂತರದಿಕ್ಕುಗೆಪಱದುಪೋಕುಮಾ ಕೋಗಿಲೆಯುಂ (ಲೋಕೋಪ. ೯–೨೧೧). ೪. = ಕೋಗಿಲೆಬಾಳೆ. 'ಕೋಗಿಲೆಯೆಲೆ' ಪರಾ. ೫. (ಕರಾ) ಮಾವಿನ ಹಣ್ಣಿನ ಓಟೆಯ ಒಳಗಿನ ತಿರುಳು. **ಕೋಗಿಲು** : ೧. "ಮಕಃ – ಕೋಗಿಲು, ಅನಮಱ, ಕೋಣ, ಮಗ್ಗಿ" (ಒಷಧಿ. ೯೭–೧೧೪). [< ಸಂ. ಕೋಕಿಲ]

**ಕೋಗಿಲೆಗಿಡ** (ನಾ). = ಕೋಗಿಲೆಬಾಳೆ: (ಕ).
[ಕೋಗಿಲೆ + ಗಿಡ (< ಗಿಡು)]

**ಕೋಗಿಲೆಪುಳು** (ನಾ). = ಕೋಗಿಲೆ ೨ : ಕೋಗಿಲೆಪುಳು ತಿಂದ ರೋಗ (ಅಶ್ವಶಾ. ೧೧–೩೩). [ಕೋಗಿಲೆ + ಪುಳು$_1$ (< ಪುಟು)]

**ಕೋಗಿಲೆಬಾಳೆ** (ನಾ). ಅಲಂಕಾರಕ್ಕಾಗಿ ಹೂದೋಟ ಮೊದಲಾದ ಕಡೆಗಳಲ್ಲಿ ಬೆಳೆಯಿಸುವ, ಬಣ್ಣಬಣ್ಣದ ಹೂಗಳನ್ನು ಬಿಡುವ ಪುಟ್ಟ ಬಾಳೆಗಿಡಗಳನ್ನು ಹೋಲುವ ಗಿಡ ; ಕಾಡಾಳೆ (ಉಕ).
[ಕೋಗಿಲೆ + ಬಾಳೆ$_1$ (< ಬಾಟೆ)]

**ಕೋಗಿಲೆಯೆಲೆ** (ನಾ). ಕೋಗಿಲೆ ಗಿಡದ ಎಲೆ ; ಕುವ್ವೆಯೆಲೆ : (ಕ).
[ಕೋಗಿಲೆ + ಎಲೆ$_1$]

**ಕೋಗಿಲೆವಱಿ** (ನಾ). ಕೋಗಿಲೆಯ ಮರಿ ; ಮರಿ ಕೋಗಿಲೆ : ಕೋಗಿಲೆವಱಿ ಮಾಮರದೊಳ್ (ಶಬ್ದಾನು. ೫೩ ವ್ಯಾಖ್ಯಾ).
[ಕೋಗಿಲೆ + ಮಱಿ]

**ಕೋಗಿಲೆವೆಣ್** (ನಾ). ಹೆಣ್ಣು ಕೋಗಿಲೆ : ಮದೋತ್ಸವದೆ ಕೋಗಿಲೆವೆಣ್ ಗಳಪಂ ನೆಗಚ್ಚುವಂತೆ (ಜಗವಿ. ೧೬–೧೧೭); ಸಲಹಿ ಪುದಲೆ ಮರಿಯಂ ಕೋಗಿಲೆವೆಣ್ ಕಾಕಂಗಳಿಂದೆ ಪಾರುವವರೆಗಂ (ಶಾಕುಂತ. ೭೦–೧೨೨). [ಕೋಗಿಲೆ + ಪೆಣ್]

**ಕೋಗೀರು, ಕೋಗಿರು, ಖೋಗೀರು** (ನಾ). ೧. ಜೀನು ; ಕುದುರೆಯ ಬೆನ್ನಮೇಲೆ ಹಾಕುವ ತಡಿ, —ದಪ್ಪವಾದ ಮೆತ್ತೆ ; ಥಡಿ : ಬಸವನೂ ತನ್ನ ಕುದುರೆಯನ್ನು ನಿಲ್ಲಿಸಿ ಕೋಗೀರು ಸೇದು ಹಿಂದಕ್ಕೆ ಸರಿಸಿದನು (ಚಿಕರಾ. ೩೪೭); ಕುದುರೆಯ ಮಾತಂತೂ ಆಯಿತು. ಇದರ ಕೋಗೀರು ತಂಗು ಮುಂತಾದ ಸಾಮಾನುಗಳನ್ನು ನೀವು ಹೊರಬೇಕೋ ನಾನು ಹೊರಬೇಕೋ . . . ಅಂದನು (ಕಥಾಮಂ. IV, ೯೫). ೨. (ಆಲಂ) ಸವಾರಿ ಮಾಡುವುದು ; ಅಧಿಕಾರ ನಡೆಸುವುದು : ಸೋದರಸಂಬಂಧ . . . ಹೇಳಿದಹಾಗೆ ಕೇಳಿಕೊಂಡಿರುತ್ತೆ ಅಂತ ಮೆಚ್ಚಿ ಮೆಚ್ಚಿ ಇವಳನ್ನು ತಂದರೆ ನನ್ನಮೇಲೇ ಕೋಗೀರು (ಶ್ರೀಕಥ. ೧೫೦). **ಕೋಗಿರು** : ೧. ಕೋಗಿರು ಕೆಳಗಣ ಸಂಣ ಪಟ್ಟಿ (ಎಕ. XIV, ನಂಜನ. ೨೮೯–೨ ; 1847). ೨. ಅತ್ತೆಯ ಮೇಲೆ ಕೋಗಿರು ಧರ್ತಿಮಾಡುವುದೇ ತನ್ನ ಕೆಲಸವೆಂದು ಅವರು ತಿಳಿದಿರಲಿಲ್ಲ (ಸಂಧ್ಯಾರಾ. ೧೩). **ಖೋಗೀರು** : ೧. ತಾವು ನಿಶಿರಾತ್ರಿಯಲ್ಲಿ ಎದ್ದು ಕುದುರೆಗೆ ತಾವೇ ಖೋಗೀರು ಹಾಕಿಕೊಂಡು ಹೊರಟಾಗ ಪೂರ್ತ ಮುಂದಟ್ಟಾಯಿತು (ಸಕತ. ೭೦).
[← ಪಾರ. ಮರಾ. ಹಿಂ. ಖೋಗೀರ]

**ಕೋಗು** 'ಕೋಹು$_1$' ನೋ.

**ಕೋಗುಂಟೆ** (ನಾ). (?): ಹನುಮಾನೆಂಬೋನು ಚಿಕ್ಕೋನು ದೊಡ್ಡೋನು ಕೋಗುಂಟೆ ಮೇಲೆ ಕೊನೆನಾಮ ಇಕ್ಕೊಂಡು ಚುಕ್ಕಿ ಬೆಳ್ಳಾಲ್ಲೀ ಹೊರಟಾನು (ಹುಟ್ಟಹ. ೩೩). [?]

**ಕೋಗುಂಡೆ** (ನಾ). ಒಂದು ಸ್ಥಳದ ಹೆಸರು (?) : ತಣಗೆರೆನಾಯಕರು ಕೋಗುಂಡೆ ಬಸವಪ ದೇವರಿಗೆ ಕೊಟ್ಟ ಹೊಂನು (ಎಕ. VII, ಚನ್ನಗಿ. ೧೪–೪ ; ?). [?]

**ಕೋಗುರಿವಾಜು** (ನಾ). ಗೇಣಿದಾರನು ಪ್ರತಿ ವರ್ಷ ಒಡೆಯನಿಗೆ ತೆರುವ ಗೇಣಿಯ ಕ್ರಮ, —ಪದ್ಧತಿ : ಎಲ್ಲಾವಕ್ಕೂ ಕೊಟ್ನಾಗೆ ಕೋಗುರಿವಾಜು ಪ್ರಕಾರ ಗೇಣಿ ಕೊಡೂಕೆ ನಿಂಗಿಷ್ಟ ಇದ್ರೆ ಜಮಾನು ಇಟ್ಗ (ಪಂಜಪಂ. ೭೨). [ಕೋಗು (< ಕೋಹು$_1$) + ರಿವಾಜು]

**ಕೋಗೋಡು** (ನಾ). ಒಂದು ಊರಿನ ಹೆಸರು : ಕೋಗೋಡ ನೊಕ್ಕಲ್ತಗೆರೆನಾಡ ಕೂಡಿಬ್ದಲ್ಲಿ (ಮೈಆರಿ. ೧೯೩೯, ೩೬–೧ ; 1034); ಕೋಗೋಡಿನ ಸಕಲಗಾವುಣ್ಡುಗಳುವರ್ (ಮೈಆರಿ. ೧೯೨೪, ೧೮–೨ ; ?).
[?]

**ಕೋಚ್** 'ಕೋಚು$_3$' ನೋ.

**ಕೋಚ$_1$** 'ಕೋಸು$_2$' ನೋ.

**ಕೋಚ$_2$** (ನಾ). ೧. ಒಣಗುವುದು ; ಶುಷ್ಕವಾಗುವುದು ; ಇಂಗುವುದು. ೨. ಸಂಕೋಚ ಹೊಂದುವಿಕೆ ; ಕುಗ್ಗುವಿಕೆ. ೩. ವಕ್ರವಾಗುವಿಕೆ ; ಬಗ್ಗಿಸುವಿಕೆ. ೪. ಕದಿಯುವಿಕೆ. [ಸಂ.]

**ಕೋಚನ** (ನಾ). ಮುಚ್ಚುವಿಕೆ ; ಸಂಕೋಚಗೊಳಿಸುವಿಕೆ ; ಮುದುರುವಿಕೆ : (ಕ). [< ಕೋಚ$_2$]

**ಕೋಚಿ$_1$** 'ಕೋಸು$_2$' ನೋ.

**ಕೋಚ್ಚಿ** (ನಾ). ಕುಟಿಲಸ್ವಭಾವದವನು; ಕುಹಕಿ; ಕಪಟಿ (?): ಆ ಸಚರಾಚರಾತ್ಮಕನವದಿರೆಚ್ಚಂಬುಗಳನಂಬರದ ಅಚೆಯಲಿ ನೆಲಕು ದುರದಿಪಡೆ ವಿಲೋಚನದ ಕಿಡಿಗಳಲಿ ಸುಟ್ಟಾ ಕೋಚಿಗಳ ಕುಚದಾಡಿ ಸುತಲಿರ್ದನು ಮುರಧ್ವಂಸಿ (ಪ್ರಹ್ಲಾ.ಚ. ೧೫–೨೬).
[ಕೋಚು$_1$ (< ಕೋಸು$_2$) + -ಇ$_3$]

**ಕೋಚಿಮಾಡು**, ಕೋಚುಮಾಡು (ಕ್ರಿ). ತುಂಡುಮಾಡು; ಕತ್ತರಿಸು: ಪವನಜಂ ಕರ್ಣನಿಯ ಚಕ್ರಲಿಸಿ ಜಡಿದು ಬಿಡಲಂ ಧನುವ ಸಾರಥಿಯು ತುರಗಮಂ ಹೊಂದೇರನು ಕೋಚಿಮಾಡಿದನೆರಡು ಸರಳಿನೊಳ್ (ತುರಂಗ. ೫೫–೫೫). **ಕೋಚುಮಾಡು**: ಕಟುವಾದ ಮಾತಿನಿಂದ ಅವನನ್ನು ಕೋಚುಮಾಡಿದರು (ರೂಢಿ). [ಕೋಚ್ಚ$_1$ + ಮಾಡು$_1$]

**ಕೋಚು$_1$** 'ಕೋಸು$_2$' ನೋ.

**ಕೋಚು$_2$** (ನಾ). ಕದ; ಬಾಗಿಲಿನ ರೆಕ್ಕೆ: "ಕೋಚೆಂದು ಪೇಚಲ್ ಪಡಿಗಳ್ಗಂ ಪೆಸರ್" (ಶಬ್ದಮ. ೨೯೨). [?]

**ಕೋಚು$_3$**, ಕೋಚ್ (ನಾ). ನಾಲ್ಕು ಗಾಲಿಯ ಕುದುರೆಗಾಡಿ; ಸಾರೋಟು: ಕೋಚುಗಾಡಿಗಳು ಈಗ ಹೆಚ್ಚು ಉಪಯೋಗದಲ್ಲಿಲ್ಲ (ರೂಢಿ). **ಕೋಚ್**: ಕೋಚ್ ಒಂದಕ್ಕೆ ಬೆಳಗ್ಗೆ ಎರಡು ಕುದುರೆ, ಸಂಜೆಗೆ ಎರಡು (ಚಂಗೂಲಿ. ೭೫). [← ಇಂ. Coach]

**ಕೋಚು$_4$** (ನಾ). ೧. "ತುದಿ" (ಜಾನಕೋ. ೯೨). ೨. "ಏರುದನಿ" (ಜಾನಕೋ. ೯೨). 'ಕೋಚೆತ್ತು' ಪರಾ. [?]

**ಕೋಚುಬಂಡೆ** (ನಾ). ಓರೆಕೋರೆಯಾಗಿ ಚಾಚಿಕೊಂಡಿರುವ ಬಂಡೆ; ವಕ್ರಶಿಲೆ: ನದಿಯಲ್ಲಾಗಲಿ, ಸಮುದ್ರದಲ್ಲಾಗಲಿ ಹೂತುಕೊಂಡು ಸಂಚಾರಕ್ಕೆ ಅಡಚಣೆಯುಂಟು ಮಾಡುವ ಮರದ ತುಂಡು, ಕೋಚುಬಂಡೆ ಮೊದಲಾದುವು (Snag. ಇಂಕ).
[ಕೋಚು$_1$ (< ಕೋಸು$_2$) + ಬಂಡೆ]

**ಕೋಚುಭಟ್ಟ**, ಕೂಚಂಭಟ್ಟ, ಕೂಚಿಭಟ್ಟ, ಕೂಚುಭಟ್ಟ, ಕೂಸಂಭಟ್ಟ (ನಾ). ಬುದ್ಧಿಗೇಡಿ; ಅವಿವೇಕಿ; ಅರೆಮರುಳ: ಓದಿ ಓದಿ ಮರುಳಾದ ಕೋಚುಭಟ್ಟ (ಗಾದೆ). **ಕೂಚಂಭಟ್ಟ**: ಚಂದದ ಗಾಜಿನ ಮನೆಯಲ್ಲಿ ಕೂತು ಕೂಚಂಭಟ್ಟರಾಗಿದ್ದೇವೆ (ಹೊಸಕ್ಷ. ೮೫). **ಕೂಚಿಭಟ್ಟ**: ಓದಿ ಮರುಳಾದೆಯೋ ಕೂಚಿಭಟ್ಟರೆ (ಸಿದ್ಧೇಶ. ೭೫–೨೧೮). **ಕೂಚುಭಟ್ಟ**: ಓದಿ ಓದಿ ಮರುಳಾದ ಕೂಚುಭಟ್ಟ (ರೂಢಿ). **ಕೂಸಂಭಟ್ಟ**: ಕೂಸಂಭಟ್ಟ (ಓದಿ ಓದಿ ಮರುಳಾದವನು) (ನಮ್ಮನು. ೧೦೮).
[ಕೋಚು$_1$ (< ಕೋಸು$_2$) + ಭಟ್ಟ]

**ಕೋಚುಮಾಡು** 'ಕೋಚಿಮಾಡು' ನೋ.

**ಕೋಚೆ** 'ಕೋಸು$_3$' ನೋ.

**ಕೋಚೆತ್ತು** (ಕ್ರಿ). ಏರುದನಿಯಿಂದ ಕೂಗು; ಗಟ್ಟಿಯಾಗಿ ಮಾತನಾಡು: "ದನಿಯೆತ್ತು" (ಜಾನಕೋ. ೯೨). [ಕೋಚು$_4$ + ಎತ್ತು$_1$]

**ಕೋಜ** (ನಾ). (?): ಸಣ್ಣಮೃದಿಯ ಕಣಿಕ ಬೆಣ್ಣೆಸಕ್ಕರೆ ಕೋಜ ಬಣ್ಣಿಗೆವಡೆದ ಸೋವಿಯಿಂ ಕಲಸಿ ಕೈಗೈವುತಣ್ಣವಾಲ್ಗೆನೆವೊಡೆದ ಘಟಿರ ಘೃತ ಮಿಶ್ರದಿಂ ದಣ್ಣನೆ ದಣಿಯ ಪಚವಿಸಿ ತಣ್ಣಮೊಷ್ಮಂ ಸಮಾನಂಗೊಳಿಸಿ ತೆಗವುತಂ ಕಣ್ಣಂಜಲಾಗದಂತಿರಿಸಿ ಬಾಳೆಯ ಚಿಲ್ವ ಹಣ್ಣು ಹೆರದುಪ್ಪದಿಂ ಘೂರಿಕೆಯನರ್ಪಿಸಿದೆ ಮಿಣ್ಣಿಗೆ ಶಿವಾದ್ವಯಿತರು (ಲಿಂಗಪು. ೮–೧೨); ಸೂಜಿ ನಡೆತಂದಯಸ್ಕಾಂತಮಂ ಪಿಡಿದಿಂದುತೇಜಮಂ ಶಶಿಕಾಂತ ಪಿಡಿದೊಜಹುಗಂಡತುಳ ವಾಜಿಯ ಧ್ವನಿಗೆ ವಾಹಳ ಪೆಚ್ಚು ಬಲಿದು ನವ ಕೋಜದಿಂ ಪ್ರಣಯವೆತ್ತು ಈ ಜಗದಿ ಮೆಜವಂತೆ ಭಕ್ತ ಕಾರಣವಾಗಿ ನೀ ಜೀವದಿ ಸುಳಿದು ಸುಲಭತ್ತ ಸಂಭವಿಸೆ ಮಹ ತೇಜ ವಿಖ್ಯಾತರಾದರ್ಗಿಖಿಳ ಶರಣ ಭೂಜನ್ಮ ಶೇಷವಳಿದು (ಲಿಂಗಪು.೨೨–೧೮). [?]

**ಕೋಜದೇವ** (ನಾ). ಒಬ್ಬಾತನ ಹೆಸರು: ಮಲ್ಲಅಯ್ಯಂಗಳ ಮಕ್ಕಳು ಕೋಜದೇವ ಅಗಲು ಬಿಟ್ಟ ಧರ್ಮ್ಮ (ಮೈಆರ. ೧೯೪೬, ೧೦–೬; ?).
[ಕೋಜ? + ದೇವ]

**ಕೋಜಯ್ಯ** (ನಾ). ಒಬ್ಬಾತನ ಹೆಸರು: ಸಾಯಿಲರ ಕೋಜಯ್ಯ ಕೊಚರರ ಅಳಿಯ ಸಿರಿ ಮೇಜ್ ಕುಜುವಾನ್ನಿಕ್ಕಿಸಿ ಕಾದಿ ಸತ್ತ (ಎಕ. X, ಶಿಡ್ಲಘ. ೫೯–೯; 900). [ಕೋಜ? + ಅಯ್ಯ$_1$]

**ಕೋಜಾ** (ನಾ). ಪತ್ತೆಹಚ್ಚುವುದು; ಶೋಧನೆ; ತಪಾಸಣೆ: ನೀನು ಊರಿಗೆ ಕಳವಾರನು, ಊರಿನಲ್ಲಾದ ಕಳ್ಳತನದ ಕೋಜಾನ್ನು ನೀನೆ ಮಾಡಬೇಕು (ಕಥಾಮಂ. IV, ೨೭).
[← ಹಿಂ. ಮರಾ. ಖೋಜ್]

**ಕೋಜೋತಗವುಣ್ಡ** (ನಾ). ಒಬ್ಬಾತನ ಹೆಸರು: ಕೋಜೋತಗವುಣ್ಡರ ಮಗ ಎಜ್ಯಮ್ಮ ವೆಳಚಿ ಗವುಣ್ಡರ ಪಟ್ಟದಳ ತೊಣ್ಣದಿ ಮಾಡಿದಂ (ಎಕ. IX, ಹೊಸಕೋ. ೮೭–೨; 750).
[ಕೋಜೋತ? + ಗವುಂಡ (< ಗಾಮುಂಡ)]

**ಕೋಟ್** 'ಕೋಟ್ಟು$_4$' ನೋ.

**ಕೋಟಿ$_1$** 'ಕೊಟ್ಟು$_3$' ನೋ.

**ಕೋಟಿ$_2$** 'ಕೊಟ್ಟು$_2$' ನೋ.

**ಕೋಟಿ$_3$** (ನಾ). ೧. ವಕ್ರತೆ; ಕುಟಿಲತನ. ೨. ಗುಡಿಸಲು; ಜೋಪಡಿ. ೩. ಕೋಟೆ; ಖಿಲ್ಲೆ. [ಸಂ.]

**ಕೋಟಿ$_4$** (ನಾ). ೧. ಒಂದು ಊರಿನ ಹೆಸರು. ೨. (ಕರಾ) ಬ್ರಾಹ್ಮಣರಲ್ಲಿ ಒಂದು ಪಂಗಡದ ಹೆಸರು; ಆ ಗುಂಪಿಗೆ ಸೇರಿದ ವ್ಯಕ್ತಿ: ಕೋಟಿಯು, ಸಕಳಾಪುರಿ, ಶಿವಳ್ಳಿ ಇವು ಹೈಗರೊಳಗಿನ ಒಳ ಭೇದಗಳು (ಕಥಾಗ. ೮೫). [?]

**ಕೋಟ್ಟ**, ಕೋಟಾ$_1$ (ನಾ). ಒಟ್ಟು ಮೊತ್ತದಲ್ಲಿ ಒಬ್ಬ ವ್ಯಕ್ತಿ ಅಥವಾ ಸಂಘವು ಒದಗಿಸಲೇಬೇಕಾದ ಅಥವಾ ಪಡೆಯಲು ಹಕ್ಕುಳ್ಳ ಪಾಲು, —ಭಾಗ, —ಅಂಶ; ಪಸುಗೆ: ವಾರದ ಒಲುಮೆಯ ಕೋಟವು ನಾಳೆಯ ಎಂದ ನಲ್ಲೆಯ ನಲ್ಲ ನೋಡಿ (ಚಂಪ್ರವೀ. ೧೫–೬). **ಕೋಟಾ$_1$**: ಈ ವಾರದ ಕೋಟಾ (ರೂಢಿ).
[← ಇಂ. Quota]

**ಕೋಟಿಗಾಮುಂಡ** (ನಾ). ಒಬ್ಬಾತನ ಹೆಸರು: ಕೋಟಿಗಾಮುಣ್ಡನುಂ [ಮಾದಿ] ಗಾಮುಣ್ಡನ ಸಹಿತ ದಿರ್ಬಲ್ಲುಮಾದರ[ನುಂ] (ಸೌಇಇ. XI-i, ೬–೨೧; 837). [ಕೋಟಿ? + ಗಾಮುಂಡ]

**ಕೋಟಿಗಾಜ** (ನಾ). ಕೋಟೆಯ ರಕ್ಷಣೆಯಲ್ಲಿರುವವನು; ದುರ್ಗಪಾಲಕ: ಬಲುದೊಡ್ಡುಯಿಡವಂಕದೊಳು ಸಲೆ ಮೆಚಿದು ಕಡುಗಲಿ ಕೋಟೆ [ಪಾಠಾಂ. ಟಿ] ಗಾಜರ ಬಲು ಫೌಜು ಬಣ್ಣಪೆನೇನ (ಕುರಾಸಾಂ. ೧೨–೩೪). [ಕೋಟಿ$_3$ + -ಕಾಜ]

**ಕೋಟರ** (ನಾ). ೧. ಮರದ ಪೊಟರೆ; ಡೊಗರು; ಟೊಳ್ಳು: "ನಿಷ್ಕುಟಃ, ಕೋಟರಃ–ಈ ೨ ಮರದ ಪೋಟರ್" (ಹಲಾಯು. ೩೭–೨೮); ಒಂದು ಮಹಾವಟವಿಟಪಿಕೋಟರಮ ಕುಲಾಯಮಾಗಿ ಕಾಕ ಮಿಥುನ ಮಿರ್ಕುಂ (ಪಂಚತಂ. ೫೨–೩); ಅದ್ರಿಕುಜಂಗಳ ಕೋಟರಂಗಳೊಳ್ ಪೋದಗೆ ಕತ್ತಿಯಿಕ್ಕಿದುದು (ಜಗವಿ. ೯–೭); ಕೋಟರದೊಳ್ ಪುಗುವ ವಿಹಗಂಗಳಂ (ಗಿರಿಕ. ೯–೬೦). ೨. ಒಳಗಿನ ಭಾಗ; ಬಿಲ; ರಂಧ್ರ: ದುರ್ಜನ ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜವಿಷ್ಟರಂ (ಶಂರಾಮಾ. ೧–೫೧); ಅನಿಮಿಷಯ್ಯನ ಜೀವಕಳೆ ಬಂದು ನಾಟಿತೀತನ ದಿವ್ಯದೇಹದ ಕೋಟರದೊಳೇನೆಂದೆನ್ನೆ (ಪ್ರಭುಲೀ. ೧೧–೨೮); ಕರ್ಣದ ಕೋಟರಂಗಳು ಕಿವುಡುಗೊಳೆ (ತೊರರಾ. ೬–೨೭–೯). [ಸಂ.]

**ಕೋಟರಪುಷ್ಪಿ** (ನಾ). ಒಂದು ಬಗೆಯ ಗಿಡ; ಎಮ್ಮೆಬಳ್ಳಿ: "ವ್ಯಾಳಿ ಕೋಟ[ಪಾಠಾಂ. ರ]ರಪುಷ್ಪಿಯೆನಲೆಮ್ಮೆವಳ್ಳಿ" (ಮಂಗರಾ. ೪೪-೪೬). [ಕೋಟರ + ಪುಷ್ಪಿ]

**ಕೋಟರಿ** (ನಾ). = ಕೋಟವಿ: (ಶ). [ಸಂ. ಕೋಟರೀ]

**ಕೋಟಲಿಗ** (ನಾ). ಕೋಟಲೆ ಕೊಡುವವನು; ಹಿಂಸೆ ಮಾಡುವವನು; ಪೀಡೆ ಕೊಡುವವನು: (ಶ). [ಕೋಟಲೆ + -ಇಗ]

**ಕೋಟಲೆ** (ನಾ). ತೊಂದರೆ; ಕಷ್ಟ; ಕಾಟ: "ಕೋಟಲೆಯೆನೆ ನೋವು" (ಧಾರನಿ. ೯೯೯); ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯಂ ವನಜದಳನಯನೆ ಸವೆದಪಳೆನೆ ಸುರಿದುವು ಕರಡೆ ಕೋರಕಣ್ಪನಿದುಬುಗಲ್ (ಉಷಾಂಉ. ೨೯೩); ಕಲೆ ಕಲೆಗೆಟ್ಟೋಡುವ ಕೋಟಲೆ ಗಾಜಿಕೆ ಕದ್ದಿರ್ದೆಂತ್ರೆಮಂ ಸಾರ್ದು (ಹರ್ಷಚ. ೧೦-೧೬); ಬೇಟದ ಕೋಟಲೆಯೊಳವನ ಮನೆಲ್ಲಾಯ್ದು (ದಶಕು. ೧೨-೬೮); ತಾಟುತ್ತ ಮೈಯು ಬಡಿವಾಗ ಮುದಿಯನ ಕೋಟಲೆಯ ನೋಡ (ಸರ್ವಜ್ಞ. ೧೮೧೧); ಅಟ್ಟುಂಡೋದು ಆರು ಕೋಟಲೆ ತಿರಿದುಂಬೋದು ಪರಮ ಸುಖ (ಗಾದೆ).

[ದೇ. ॥ ತಮಿ. ಕೋಟ್ಪಾಲ್ಕೈ; ಮಲ. ಕೋಟ; ತುಳು. ಕೋಟಲೆ; ತೆಲು. ಕೋಡಾಟು]

**ಕೋಟಲೆಗುಡು** (ಕ್ರಿ). ಕೋಟಲೆ ಕೊಡು; ತೊಂದರೆಯನ್ನುಂಟುಮಾಡು; ಕಷ್ಟಕೊಡು; ನೋಯಿಸು: ನಿರಂತರವಾಗಿ ಕೋಟಲೆಗುಡುವ ನಮ್ಮ ಒಂದು ಅಂಗದಲ್ಲಿ (ಸುಗುಣಬೋ. ೬೪). [ಕೋಟಲೆ + ಕುಡು₁ (< ಕೊಡು₁)]

**ಕೋಟಲೆಗೊಳ್** (ಕ್ರಿ). ತೊಂದರೆಪಡು; ಶ್ರಮಪಡು; ಕಷ್ಟಪಡು; ನೋವನ್ನನುಭವಿಸು: ಬಡಿವ ಕಾಲ್ ಧೂಭಾಗದೊಳ್ ತಂದು ಕಾಟಕುಟುಂ ಕೋಟಲೆಗೊಳ್ಳೆ ರತ್ನಮಕುಟದ್ಯೋತೋತ್ರಮಾತಿಗಂ (ಶಾಂತಿಪು. ೧೨-೧೫೧); ಆ ತಪೋವನದೊಳ್ಕೋಟಲೆಗೊಂಡು ಮಾಖಿದ ಕಪಂಗೆಯ್ವುತ್ತಿರಲ್ (ಕಾದಂಬ. ೯೯); ಸಂಕಟಂ ಕುದಿದು ಕೋಟಲೆಗೊಂಡೆನಿನ್ನೆಗಂ (ವಾಗೀಶ. ೨೬೧); ಕಡುಗುದಿಗುದಿದು ಕೋಟಲೆಗೊಂಡು ದಣಿಕೇನೆ (ಉದ್ಯಾಮ್ರೋ. ೧೯-೩೬); ಊಟ ನಿದ್ದೆಗಳೊಂದರೊಳು ಸುಖಮಿಲ್ಲದೆ ಕೋಟಲೆಗೊಂಡು ಕುಗ್ಗುವರು (ಹದಿಬ. ೬-೭); ಕೋಟ ಮಾಡಿದವನು ಕೋಟಲೆಗೊಳ್ಳ (ಗಾದೆ). [ಕೋಟಲೆ + ಕೊಳ್₁]

**ಕೋಟಲೆಗೊಳಿಸು** (ಕ್ರಿ). ಕೋಟಲೆಗೆ ಗುರಿಮಾಡು; ಹಿಂಸೆಪಡಿಸು; ಕಾಡು; ನೋಯಿಸು: ಅಮರತ್ವಮಂ ಪಡೆದಮರಸಮಿತಿಯಂ ಕೋಟಲೆಗೊಳಿಪ ಹಿರಣ್ಯಾಕ್ಷನಂ (ಪಂಚತಂ. ೨೪೮-೧೦); ಕೋಟಲೆಗೊಳಿಪರು ಬಿಟಬಿದೂಷಕರ ಕಷ್ಟೇಟದಿ ಮರುಳುಮಾಡುವರು (ಮೋಹತ. ೧೮-೪೮); ಬಲು ಮೃಗವು ಮರಪಕ್ಷಿ ಕೀಟಕ ಜಲಚರೌಘದಿ ಜನಿಸಿದೆನು ಕೋಟಲೆಗೊಳಿಸದೇಡಕಟ ಮಾನವನಾದ ಬಳಿಕಿನ್ನು (ಹರಿಕಾ ೫೭). [ಕೋಟಲೆಗೊಳ್ + -ಇಸು₃]

**ಕೋಟಲೆಪಡು** 'ಕೋಟಲೆವಡು' ನೋ.

**ಕೋಟಲೆಬಡಿಸು** 'ಕೋಟಲೆವಡಿಸು' ನೋ.

**ಕೋಟಲೆಬಡು** 'ಕೋಟಲೆವಡು' ನೋ.

**ಕೋಟಲೆವಡಿಸು**, ಕೋಟಲೆಬಡಿಸು (ಕ್ರಿ). ತೊಂದರೆಗೆ ಗುರಿಮಾಡು; ಕಾಟಕೊಡು; ನೋಯಿಸು: ಪಿರಿದಂ ಕೋಟಲೆವಡಿ[ಪಾಠಾಂ. ಗೊಳಿ]ಸುವ ದುರಿತಾರಾತಿಗಳನಾವಗಂ ಗೆಲ್ದುದಱಿಂದದಱಂತನೆಂಬುನಾಮಂ ಪರಮಜಿನಂಗೆ (ಸಮಯ. ೪-೨೦೦). **ಕೋಟಲೆಬಡಿಸು:** ಕಣ್ಣೆ ಬಾಡ ಕೈಗಡಿಸಿ ಕೋಟಲೆಬಡಿಸುವುದು (ಕರ್ಣಾವೃ. ೧೦-೩೧). [ಕೋಟಲೆವಡು + -ಇಸು₃]

**ಕೋಟಲೆವಡು**, ಕೋಟಲೆಪಡು, ಕೋಟಲೆಬಡು (ಕ್ರಿ). ಕಷ್ಟಪಡು; ತೊಂದರೆಗೊಳಗಾಗು; ಹಿಂಸೆಗೆ ಗುರಿಯಾಗು; ನೋವನ್ನನುಭವಿಸು: ಕೋಟಲೆವಟ್ಟೀ ನಿಷ್ಫಲದೇಹಯೋಗವನೊಡಂಬುದೇನ್ (ಪಂರಾಮಾ. ೧೬-೫೫). **ಕೋಟಲೆಪಡು:** ನಿನ್ನನ್ನು ದೊಡ್ಡವನನ್ನಾಗಿ ಮಾಡಲು ನಾನೆಷ್ಟು ಕೋಟಲೆಪಟ್ಟೆ (ರೂಢಿ). **ಕೋಟಲೆಬಡು.** 'ಕೋಟಲೆಬಡಿಸು' ಪರಾ. [ಕೋಟಲೆ + ಪಡು₁]

**ಕೋಟವಿ** (ನಾ). ೧. ಬತ್ತಲೆ ಹೆಂಗಸು: "ನಗ್ನಾ, ಕೋಟವೀ - ಈ ೨ ನಗ್ನೆ" (ಹಲಾಯು. ೬೯-೩೨೯). ೨. ದುರ್ಗಾದೇವಿ. 'ಕೋಟವಿಪುರ' ಪರಾ. [ಸಂ. ಕೋಟವೀ]

**ಕೋಟವಿಪುರ** (ನಾ). (ಅಮೃತ ಸಮುದ್ರದ ಮಧ್ಯದಲ್ಲಿರುವ ಮಣಿದ್ವೀಪದಲ್ಲಿ ನೆಲಸಿರುವುದಾಗಿ ಪುರಾಣಗಳಲ್ಲಿ ವರ್ಣಿತವಾದ) ದುರ್ಗಾದೇವಿಯ ಪಟ್ಟಣ: ಸುರಪುರಕೆ ಹರಪುರಕೆ ಹರಿಯಜ ಪುರಕೆ ಅಳಕಾಪುರಕೆ ಕೋಟವಿಪುರಕೆ . . . ಬೊಮ್ಮನಪುರಕೆ ನೂರ್ಮಡಿ ಮಿಗಿಲೆನಿಸಿ ತಾ ಕರ ಚೆಲುವಿನಿಂದೆಸೆವುದದು ಪಾತಾಳದೊಳು ಲಂಕೆ (ಕೌಶಿಂ. ೩೯-೨). [ಕೋಟವಿ + ಪುರ]

**ಕೋಟವೊಕ್ಕಲಿಗ** (ನಾ). ಒಕ್ಕಲಿಗರಲ್ಲಿ ಒಂದು ಪಂಗಡ. ℙ ಅಡಕೆ ಮರಗಳ ಗೊನೆಗಳಿಗೆ ಕೊಟ್ಟೆ ಕಟ್ಟುವ ಕಸುಬಿನ ಒಕ್ಕಲಿಗ: ಕೋಟವೊಕ್ಕಲಿಗರು– ಇವರು ಶಿರಸಿ, ಸಿದ್ದಾಪುರ ತಾಲ್ಲೂಕುಗಳಲ್ಲಿ ಇರುತ್ತಾರೆ. ಅಡಿಕೇಗೊಂಚಲುಗಳಿಗೆ ಚೀಲುಮಾಡಿ ಹಾಕುವ ಹೋರೆಯನ್ನು ಮಾಡುತ್ತಿರುವ ಕಾರಣ ಇವರಿಗೆ ಈ ಹೆಸರು ಬಂದಿದೆ (ಕಭಾಗ. ೧೪೪). [ಕೋಟ್ಟ₂ (< ಕೊಟ್ಟೆ₂) + ಒಕ್ಕಲಿಗ]

**ಕೋಟಾ₁** 'ಕೋಟ್ಟ₅' ನೋ.

**ಕೋಟಾ₂** (ನಾ). ಕರುಳು: (ಶ). [← ಪ್ರಾ. ಕೋಠಾ < ಸಂ. ಕೋಷ್ಠ]

**ಕೋಟಾಚಕ್ರ** (ನಾ). ಕೋಟೆಯ ಮಂಡಲ, —ಸುತ್ತು: ಜಂಬೂದ್ವೀಪಮಂ ಸುತ್ತಿ ಸೌಂದರಮಾಗಿರ್ಪವೊಂದಿರ್ಪ್ಪದಪ್ರತಿಮ ಕೋಟಾಚಕ್ರಮಂ ಸುತ್ತಿ . . . ನಿರಂತರ ಕಾಂತಂ ಪರಿಖಾಂತರಂ (ಪುಷ್ಪಚ. ೨-೩೨); ಆ ತೋಂಪೊಳಲ ಅಂತರಾಳದೊಳಿರ್ಪದೊಂದು ಕೋಟಾಚಕ್ರಮಂತರಿಕ್ಷವ ಚುಂಬಿಸುಕ (ಕುರಾಸಾಂ. ೪-೮೫); ಮೇಲ್ವ ಕೋಟಾಚಕ್ರಭವಕಾಂತಿ ಮುಂಬರಿದು ಕರಡ ತರಿ ಸಪ್ತಾರ್ಚಿತೇಜಂಗಳಂ ದಿವದಲಿರಿಸಿರ್ಪ ದೀಪಗಳ ದೆಸೆಯುನೀವುತಲಿರ್ದುದು (ವೆಂಕಾಠಾ. ೧-೪-೯). [< ಸಂ. ಕೋಟಚಕ್ರ]

**ಕೋಟಾಯಂತ್ರ** (ನಾ). ಕೋಟೆಯನ್ನು ಭೇದಿಸುವ ಯಂತ್ರ, —ಉಪಕರಣ. ನೊಣೆಯುಲ್ ನುಂಗಲಿಳಾತಳಂ ಮುರಿದು ವಹೂರಿಟ್ಟಂತೆ ದುರ್ಗಕ್ಕೆ ನಿಚ್ಚಣಿ ಸಾಚುರ್ದೊಳೆ . . . ಪಡಿಗೋಂಟಿಯೆಂಬ ಬಹು ಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂತಪು. ೧೧-೮೩). [< ಸಂ. ಕೋಟಯಂತ್ರ]

**ಕೋಟಾರ** 'ಕೊಟ್ಟಾರ₁' ನೋ.

**ಕೋಟಾವಲಯ**, ಕೋಟಾವಳಯ (ನಾ). = ಕೋಟಾಚಕ್ರ: ಬರಲರುತೆ ದರ್ಶನಕಗುರ್ವಿದುದು ಪರ್ವತಂಬೋಲ್ ಬಂದೆ ಬಂದೆಯ ಮಸೆದು ಬೆಸೆದು ಕೋಟಾವಲಯಭಿತ್ತಿ (ಶ್ರೀರಾಮಾ. ೪೩೩-೯೯೪). **ಕೋಟಾವಳಯ:** ನಿಲುವೆವಿಲ್ಲಿ ವಿರೋಧಿ ಸಂತತಿಯುಬಲುಹನಾಲಿಸಬಹುದು ಕೋಟಾವಳಯವಿದೆ ಹತ್ತಿರೆಯೆನುತ ಗುರುಸೂನು ರಥವಿಳಿಯೆ (ಉದ್ಯಾಗ. ೯-೨); ತೊಳಲದಮರಾವತಿಗೆ ಪೊಗೆ[ಪಾಠಾಂ. ತೊಲೆ, ಮಿಗೆ] ವೆಗ್ಗಳವೆಸಲು ರಂಜಿಸಿತು ಕೋಟಾವಳಯ ಕೊತ್ತಳದಾಳುವೇರಿಯ ವಿವಿಧ ರಚನೆಯಲಿ (ಕೂರಠಾ. ೪-೧೦-೧೬). [< ಸಂ. ಕೋಟವಲಯ]

**ಕೋಟಾವಳಯ** 'ಕೋಟಾವಲಯ' ನೋ.

**ಕೋಟಾವಳಿ** (ನಾ). ಕೋಟೆಗಳ ಸಾಲು, —ಪಂಕ್ತಿ: ಧಗಧಗಿಪ ಕೋಟಾವಳಿಯ ಹೊಗರೆಡಗುವ ಹೇಮದ ಕೊತ್ತಳಂಗಳ (ನಳಚ. ೩-೨೫). [ಕೋಟೆ₃ + ಆವಳಿ₁ (= ಆವಲಿ)]

**ಕೋಟಿ₁** (ನಾ). ೧. ಕೊನೆ; ತುದಿ; ಅಗ್ರ; ಕೋಡು: ಅಕ್ಕಂ ಚಕ್ರಂ ಕೇವಲ ವಿಪುಲ ತುಲಾಕೋಟಿಯಿಂ ತೂಗಿ ತನ್ನರ (ಪಂಪಭಾ. ೧-೬೨); ಶ್ರೀಕಾಂತಪದ್ವಿಧರ್‍ ಸ್ವಭ್ರೂಕೋಟಿಯ ಪರ್ದಿನಿಂದವಪ್ಪರ್ ಕಿಡುವರ್ (ಜಗವಿ. ೪-೧೦೪). ೨. ತರಗತಿ; ವಿಭಾಗ; ವರ್ಗ: ಇವನು ಮನುಷ್ಯ ಕೋಟಿಗೆ ಸೇರಿದವನೇನಲ್ಲ (ರೂಢಿ). ೩. ಆಕ್ಷೇಪಣೆ; ಮೊದಲಿಕೆ: ಭೋಜನ ಮಾಡುತ್ತಿರುವಾಗ ಎರಡೂ ಪಕ್ಷದ ಸ್ತ್ರೀಯರು ಪರಸ್ಪರ ಕುಚೇಲಿ ಕೋಟಿಗಳನ್ನು ಮಾಡಿ ಭೂಮುದ ಹಾಡು ಹಾಡಹತ್ತಿದರು (ಕುಳು. ೩೨). ೪. ಅಸಂಖ್ಯವಾದದ್ದು; ಲೆಕ್ಕವಿಲ್ಲದ್ದು; ಅಪರಿಮಿತವಾದದ್ದು: ಉಪಾತ್ತನಾರಾಯಣನಾದ ದೇವನೆನಮಗೇಗಳಕೇಸರಿ ಸೌಖ್ಯಕೋಟಿಯಂ (ಪಂಪಭಾ. ೧-೧); ಹಾಲುತುಪ್ಪದ ಕೋಟಿ ಕೊಪ್ಪರಿಗೆಯಂಕಲ್ಲಿ ಸಮೆದು ಶಿವಲಿಂಗಕ್ಕೆ ಕಂಪಿಡುತ್ತಿರೆ ಕಂಡು (ಬಸರ. ೭-೧೬); ಒಡರೊಳಬುಜ ಭವಾಂಡ ಕೋಟಿಯನಡಗಿಸಿಪ್ಪ ಮಹಾಮಹಿಮುಗಾಸ್ತುತ ತೊಟ್ಟಿಲೊಳ ಮವು ನಿಗಮಾಳಿಗಳು ಬೆಜಗಾಗೆ (ಕೊರಠಾ ೧-೮-೬೩); ಎಲ್ಲಮ್ಮನ ಭಕ್ತ ಕೋಟಿಯೆ ಇದಕ್ಕೆ ಸಾಕ್ಷಿ (ಕನಾಟ. ೩೬); ಕೋಟಿಭಾಗ್ಯವಿದ್ದವ ನಾದರೂ ಕಡೆಗೆ ಕಾಡಿನಲ್ಲೇ ಇರಿಸುತ್ತಾರೆ (ಗಾದೆ). ೫. ಮೂಲೆ; ಕೋಣ: "ಅಣಿ, ಅಶ್ರಿ, ಕೋಟಿ, ಅಶ್ರ, ಕೋಣ - ಕೆಣ ಗೋಟು" (ಹಲಾಯು. ೧೨೦-೯೨). ೬. ಕಣ್ಣಿನ ತುದಿ, —ಕೊನೆ: (ಕ). ೭. ಕತ್ತಿಯ ಅಲಗು, —ಬಾಯಿ. ೮. ಬಿಲ್ಲಿನ ತುದಿ; ಕೊಪ್ಪು. ೯. ಪ್ರಾಧಾನ್ಯ; ಶ್ರೇಷ್ಠತೆ. ೧೦. ಏಡವೆ; ಅಲಂಕಾರ. ೧೧. ಮನಸ್ಸಿನ ಉಲ್ಲಾಸ; ಸಂತೋಷ. ೧೨. ಮರದ ಪೊಟರೆ; ಬಿಲ. ೧೩. ಕೈಯ ಬಳೆ, —ಕಡಗ. ೧೪. ಸಮರ; ಯುದ್ಧ. ೧೫. ಒಂದು ಸಂಖ್ಯೆ; ನೂರುಲಕ್ಷ: ವೈದಿಕರಪ್ಪ ವೇದವಿತ್ತುಗಳೊಂದು ಕೋಟಿಗೆ ಅನ್ನವನಿಕ್ಕಿದ ಫಲಕ್ಕೆ ಕೋಟಿ ಮಿಗಿಲು ಶಿವಶರಣಂಗೆ ಒಂದು ಭಿಕ್ಷವನಿಕ್ಕಿದ ಫಲ (ಅದವ. ೨೨); ಸತ್ತ ಮೂಜೇ ಕೋಟಿಯವು ಕೈವಶೀಕಿಸಿತು ದಳಪತಿಗೆ (ಕುವ್ಯಾಕ. ೨-೩); ಕೋಟಿವರಹಾ ಕೊಟ್ಟರೂ ಕೋಮಟಿಯ ಸಾಕ್ಷಿ ನಂಬಕೂಡದು (ಗಾದೆ). ೧೬. [ರೇಖಾಗ] ಸಮಕೋನ ತ್ರಿಕೋಣದ ಲಂಬಭುಜ: "ಉತ್ಕರುಷಿಯೊಳು ಧನುಷಿನೊಳು ಸಂಖ್ಯೆಯೊಳು ಕೋಟಿಯಕ್ಕು" (ಮಂಗರಾ. ೧೪೨-೧೫); "ಅಗಣಿತಭೂಷಣಂ ಸುರಗಿ ಸೌಂದರ ಕೋಟಿರ ಚಾಪದಂತ್ಯ ಸಂಯು ಗಮನೆಯುತ್ಸವಂ ಗಣನೆಯೊಂದಿವು ಕೋಟಿ ಸಮಾಹ್ವಯಂ (ನಾನಾರ.೪೪); "ಗುಹೆ ಬಿಲ್ಲಕೊಪ್ಪು ಲಿಪ್ಯುತ್ಸಹ ರೂಪು ಕಠಾರಿ ಕರಭೂಷಣ ಸಮರಂಗಳ್ ಸಹಜದೊಳೆಂಟು ಪೆಸರ್ ಬಳಕಹುದೈ ಕೇಳ್ ಕೋಟಿಶಬ್ದ ಮೆಸಿಕುಂ ಜಗದೊಳ್" (ನಾನಾಕಂ. ೮೬).

**ಕೋಟಾನುಕೋಟಿ**=ಕೋಟಿಗಟ್ಟಲೆ; ಅಸಂಖ್ಯ: ಪುನರ್ಭವಂಗಳವು ಕೋಟಾಕೋಟಿಗಳ್ ಪಾಜು ದೀರ್ಘನೆಗಂ ಪಂದಲೆಗಳ್ (ಪಂಪರಾಮಾ. ೧೪-೧೬೭); ವೆಜ್ಜಿದವು ಗುಡಿ ಕೋಟಾ ಕೋಟಿ ಭೂತಳ ನೆಜೆಯದು ಬೀದಿಗೆಂದೆನಲು (ಕುರಾಸಾಂ. ೧೯-೫೩). **ಕೋಟಾನುಕೋಟಿ, ಕೋಟ್ಯಾನುಕೋಟಿ**=ಕೋಟ್ಯಂತರ; ಅಸಂಖ್ಯ: ಹಠಿಯುಜೇಂದ್ರಾದಿ ಗಳು ಕೋಟಾನುಕೋಟಿಗಳು ಮರಣವಪ್ಪರು (ವೀಕ್ಷೈಷ. ೨-೫-೧೪); ಕೋಟ್ಯಾನುಕೋಟಿ ವಿಷ್ಣು ಬ್ರಹ್ಮೇಂದ್ರಾದಿಗಳು ಕಾಲವು ತುಂಬಿದ ಬಳಿಕ ಮರಣವಾಗುವರು; ಸನ್ನೀದ ಕೋಟಿ ಚಕ್ರವರ್ತಿಗಳಾದರೂ ಸಾಯುವರು (ವೀಕ್ಷೈಷ. ೨-೫-೧೪ ಟೀಕೆ) [ಸಂ.]

**ಕೋಟಿ₂, ಕೋಠಿ₂** (ನಾ). ವಸ್ತುಗಳನ್ನು ಕೂಡಿಡುವ ಸ್ಥಳ; ಉಗ್ರಾಣ; ಧಾನ್ಯಾಗಾರ. 'ಕೋಟಿಖೋಲಿ' ಪರಾ. ೨. ಹಾಯಿ ಹಡಗು; ನಾವೆ: ಜಲಮಾರ್ಗದಿಂದ ಮಚವೆದೊಳಗಿಂದ ಅಥವಾ ಕೋಟಿಯದೊಳಗಿಂದ ಕಳುಹಿಸಲಿಕ್ಕೆ ಬರದರೆ ಅದಕ್ಕೆ ದೀಳುವ ಆಡತಿ (ಮುಂಬವ್ಯಾ. ೩೬೩). **ಕೋಠಿ₂**: ೧. ದಾರೀಲಿ ಕೋಠಿಯಿಂದ ಪರಿಶು ಗಂಧದ ತುಂಡು ಗೊಂಡು ಅಲ್ಲಿಗೇ ಬಂದು ಬಿಡು (ಮಾಂಗಲ್ಯ. ೧೫); ಮಿಕ್ಕ ಎಲ್ಲಾ ಸಾಮಾನುಗಳನ್ನೂ ಸಂಗ್ರಹಿಸಿಟ್ಟ ಅವನ ಕೋಠಿ (ಶಕ್ಕಡಿ. ೧೪); ನಮ್ಮ ವ್ಯಾಪಾರಕ್ಕೆ ಅಡ್ಡಿ ಬರುತ್ತಿದ್ದುದನ್ನು ಕಂಡ ಅರಬ್ಬರು ಪೋರ್ಚುಗೀಸರು ತಂಗಿದ್ದ ಮನೆ ಮತ್ತು ಕೋಠಿಯ ಮೇಲೆ ಧಾಳಿ ಮಾಡಿದರು (ಪ್ರವಾಇ. II, ೨೨೫); ಕೋಠೀ ವ್ಯವಸ್ಥಾ ನಿನ್ನ ಕಡಿಗೆ; ನೀ ಬೇಕಾದ್ದು ಮಾಡಿಸಿಬಿಡು ಹೋಗಲಿ (ಕಿಡುಗು. ೫೫). [← ಹಿಂ. ಮರಾ. ಕೋಠೀ. / ಪ್ರಾ. ಕೋಟ್ಟ, ಕೋಟ್ಟಯ; < ಸಂ. ಕೋಷ್ಠ]

**ಕೋಟಿಕ** (ಗು). ೧. ತುತ್ತತುದಿಯ. 'ಕೋಟಿಕಶಿಲೆ' ಪರಾ. (ನಾ). ೨. ತುತ್ತ ತುದಿ; ಶಿಖರ. [ಸಂ.]

**ಕೋಟಿಕಶಿಲೆ** (ನಾ). [ಜೈನ] ಸಿದ್ಧಶಿಲೆ: ತಮ್ಮನುಂ ತಾನುಂ ಅನೇಕ ಕುಲರಾಜ ಸಮೂಹಂಬೆರಸು ಆಡುವ ನೆವದೊಳ್ ಪೋಗಿ ಕೋಟಿಕ ಶಿಲೆಯಂ ಕೋಜು (ಶಾಂತಿಪು. ೫-೨೫ ವ); ಕೋಟಿಕಶಿಲೆಯನೆತ್ತಿದ ಮಹಾ ಸತ್ತ್ವ (ಪಂಪರಾಮಾ. ೧೪-೧೮೮ ವ); ಬರುತ ಬಟ್ಟೆಯೊಳೆರ್ದ ಕೋಟಿಕ ಶಿಲೆಗಂಡು ನೆರೆದುದುಗಳೆಂದರು (ವರ್ಧಚ. ೪-೪೮). [ಕೋಟಿಕ + ಶಿಲೆ]

**ಕೋಟಿಖೋಲಿ, ಕೋಠೀಖೋಲಿ** (ನಾ). (ಉಕ) ವಸ್ತುಗಳನ್ನು ಕೂಡಿಟ್ಟ ಕೋಣೆ; ಉಗ್ರಾಣ: ಕೋಟಿಖೋಲಿಯಲ್ಲಿ ಅಕ್ಕನೊಂದಿಗೆ ಚಹಾ ಅವಲಕ್ಕಿಗೆ ಕೂತೆ (ವ್ಯಸ. ೯). **ಕೋಠೀಖೋಲಿ**: ದಡಬಡು ಬಂದು ಎಲ್ಲಾ ಜಾಗಾ ಹಿಗಡ ನೀವು ಕೋಠೀಖೋಲ್ಯಾಗ ಬಂದು ಮಲ ಕೊಂಡ್ರಿ (ಸಮುಜೀ ೨೮೨). [← ಹಿಂ. ಮರಾ. ಕೋಠೀಖೋಲೀ]

**ಕೋಟಿಗಾವುಂಡ** (ನಾ). ಒಬ್ಬಾತನ ಹೆಸರು: ಅವರನ್ವಯತಿಳಕಂ ಲೋಕವಿಶ್ರುತಂ ಪಿರಿಯ [ಕೋ]ಟಿಗಾವುಣ್ಡಂ ಸಂಭಾವಿಸಿದಂ (ಸೌಇಇ. XI-i, ೯೫-೯; 980). [ಕೋಟಿ₁+ ಗಾವುಂಡ (< ಗಾವುಂಡ)]

**ಕೋಟಿನಾಳು** (ನಾ). (ಕರಾ) ಹುಟ್ಟಿದ ದಿನದ ವಿವರ ಮತ್ತು ಗ್ರಹಕುಂಡಲಿಯನ್ನು ಒಳಗೊಂಡ ಜಾತಕ; ಜನ್ಮಕುಂಡಲಿ: ಜೋಯಿಸರಿಗೆ ಸಂತಾನವಾಗದಿರಲೇನು ಕಾರಣವೆಂದರಿಯಲು ಕೋಟಿ ನಾಳು (ಜಾತಕ) ತೋರಿಸಿದರು (ಧ್ರಾಂತಿಸು. ೪). [?]

**ಕೋಟಿಪತ್ರ** (ನಾ). ೧. ದೋಣಿಯನ್ನು ನಡಸುವ ಹುಟ್ಟು: "ಅರಿತ್ರಂ, ಕೋಟಿಪ[ಪಾಠಾಂ. ಪಾ]ತ್ರಂ - ಈ ೨ ನಾವೆಯ ಸೋಗೆ" (ಹಲಾಯು. ೧೧೧-೫೦). ೨. ಹಡಗಿನ ಮುಂಭಾಗ; ಚುಕ್ಕಾಣಿ: "ಹಡಗಿನ ಮುಖಂ ಕೋಟಿಪತ್ರನೆನಿಸಿಕ್ಕುಂ" (ಮಂಗರಾ. ೧೨೧-೫). [ಕೋಟಿ₁ + ಪತ್ರ]

**ಕೋಟಿಪಾತ್ರ** (ನಾ). = ಕೋಟಿಪತ್ರ ೧: "ಅರಿತ್ರಂ, ಕೋಟಿಪಾ[ಪಾಠಾಂ. ಪ]ತ್ರಂ-ಈ ೨ ನಾವೆಯ ಸೋಗೆ" (ಹಲಾಯು. ೧೧೧-೫೮). [ಕೋಟಿ₁ + ಪಾತ್ರ]

**ಕೋಟಿಯೇರಿಸು** (ಕ್ರಿ). ಆಕ್ಷೇಪಿಸು; ಮೊದಲಿಸು; ಪ್ರತಿವಾದಗಳನ್ನು ಒಡ್ಡು; ತರ್ಕಮಾಡು: ರಂಗನಾಥನು ಮುರಾರೀ ಕವಿಯ ಜಾಡನ್ನು ಹಿಡಿದು "ಅಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷನ ಗಳಿಸಿಕೊಂಡರೆ ಸಾಲದೆ? ಸಂಸ್ಕೃತದಲಿನ್ನೇನು?" ಎಂದು ಕೋಟಿಯೇರಿಸಿದನು (ಕವಿಕಾಂ. ೯೯). 'ಕೋಠಿ₁' ಪರಾ. [ಕೋಟಿ₁ + ಏರಿಸು(< ಏಜಿಸು)]

**ಕೋಟವರ್ಷೆ** (ನಾ). ಒಂದು ಔಷಧಿಯ ಹೆಸರು: "ಮರುನ್ಮಾಲಾ, . . . ಕೋಟವರ್ಷಾ, ಲಂಕೋಯಿಕಾ, ಲಂಕಾಸಿಕಾ – ೧೦ ಸ್ಪೃಕ್ಕವೆಂಬ ಗ್ರಂಥ್ಯದ್ರವ್ಯ; ಸಂಕೇಬೇರು" (ಸಿದ್ಧಾಂತಿ. ೧೨೫).
[ಸಂ. ಕೋಟವರ್ಷಾ]

**ಕೋಟಿಶ** (ನಾ). (ಹೊಲಗದ್ದೆಗಳಲ್ಲಿ ಹೆಂಟೆಗಳನ್ನು ಒಡೆಯುವ) ಮರದ ಕೊಡತಿ; ಹಲಬೆ: "ಕೋಟ[ಪಾಠಾಂ. ಟೀ]ಶಂ, ಲೋಷ್ಟ ಭೇದನಂ – ಈ ೨ ಹಲಿಕೆ" (ಹಲಾಯು. ೯೪–೪೨೨); "ಹರಿಕೆ ಕೋಟಿಶ ಮುಳ್ಳು ಲೋಷ್ಟಭೇದಂ" (ಮಂಗರಾ. ೧೧೯–೧). [ಸಂ.]

**ಕೋಟಿಹೊರಿಸು** (ಕ್ರಿ). ಅಪಾದನೆಯನ್ನು ಹೇರು, —ಹೊರಿಸು: ರಾಜನ ಮೇಲೆ ಅವನ ಸ್ನೇಹಿತರು ಕೋಟಿಹೊರಿಸುವುದಕ್ಕೆ ಮೊದಲಾಯಿತು (ನಟಸಾ. ೬೧). [ಕೋಟಿ$_1$ + ಹೊರಿಸು (< ಪೊರಿಸು)]

**ಕೋಟೀರ** (ನಾ). ೧. ಕಿರೀಟ; ಮಕುಟ: "ಕಿರೀಟಂ, ಉಷ್ಣೀಷಂ, ಕೋಟೀರಂ, ಮುಕುಟಂ – ಈ ೪ ಮಕುಟಂ" (ಹಲಾಯು. ೯೩–೪೧೧); ಶ್ರೀರಮಣಂ ಪುಟ್ಟಿರೆ ಕೋಟೀರಾದ್ಯಾಭರಣ ಚಕ್ರಮುಖ್ಯಾಯುಧ ನಾನಾರಶ್ಮಿಯನು ವಿಜೃಂಭಿಸೆ ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ (ಜಗವಿ. ೩–೧); ತೇರು ಗಮಿಸುವ ವೇಗಕರಸನ ಚಾರುರತ್ನಸ್ಫುರಿತ ಶಿರ ಕೋಟೀರ ಕೆಡೆದುದು (ಅಂಬಿಕಾ. ೪೮–೩೧). ೨. ಜಡೆ; ಮುಡಿ: ಸೋಮಕೋಟೀರಧಾರನಂ . . . ತ್ರಿಜಗತ್ರನಂ (ಭಕ್ತ್ಯಾಚ. ೩–೫೯); ಜಯಜಯ ಸುಧಾಕರ ಕಲಾಕಲಿತ ಕೋಟೀರ (ರಾಜಶೇ. ೧೪–೧೬೯ ವ).
[ಸಂ.]

**ಕೋಟೀಶ$_1$** (ನಾ). = ಕೋಟಿಶ: "ಕೋಟೀ[ಪಾಠಾಂ. ಟಿ]ಶಂ, ಲೋಷ್ಟಭೇದನಂ – ೨ ಹಲಿಕೆ" (ಹಲಾಯು. ೯೪–೪೨೨). [ಸಂ.]

**ಕೋಟೀಶ$_2$** (ನಾ). ಕೋಟ್ಯಧೀಶ: ಅವನೊಬ್ಬ ಕೋಟೀಶ (ರೂಢಿ).
[ಕೋಟಿ$_1$ + ಈಶ]

**ಕೋಟು$_1$** (ನಾ). ಮೈಗೆ ತೊಟ್ಟುಕೊಳ್ಳುವ ಒಂದು ಬಗೆಯ ದಪ್ಪವಾದ ಉಡುಪು; ಮೇಲಂಗಿ: ಕೋಟುಗಳೇ ಪ್ರಬಲವಾಗಿ ಮುಂಚಿನ ನಿಲುವಂಗಿಗಳು ಎಲ್ಲಿಯೋ ಅಡಗಿದವು (ಕೊಳಮು. ೬೨); ಕಾಲಿಗೆ ಬಿಳಿ ಇಜಾರು; ಉದ್ದವಾದ ಕಪ್ಪುಕೋಟು; ತಲೆಗೊಂದು ಪಾಗೋಟೆ . . . ಧರಿಸಿದ್ದನು (ನಿಷ್ಕಾಮ. ೨). [← ಇಂ. Coat]

**ಕೋಟು$_2$**, ಕೋಟ್ (ನಾ). ಇಸ್ಪೀಟು ಆಟದಲ್ಲಿ ಒಂದು ಬಗೆ. ೪ ಪಕ್ಷ ಕಟ್ಟಿ ಆಡುವಾಗ ಒಂದು ಪಕ್ಷದವನು ತನ್ನ ಪ್ರತಿಪಕ್ಷದವರೊಡನೆ ಎಲ್ಲಾ ಎಲೆಗಳನ್ನೂ ಗೆಲ್ಲುವುದು: ಅವರಿಗೂ ಮೂಕವಾಗಿ ನಡೆದ ಆಟ 'ಕೋಟು' 'ಒಕ್ಕೈ'ಗಳು ಒಂದರಮೇಲೊಂದು ಒದಗಿದಾಗ ಒಮ್ಮೆಲೇ ಚತುರ್ಮುಖವಾಗಿ, ಷಣ್ಮುಖವಾಗಿ ಕೆಲೆಯ ಹತ್ತಿತು (ಮೂರುದಾ. ೮). **ಕೋಟ್**: ಇವರ ಜೋಡಿದಾರನು 'ಕೋಟ್'- ಎಂದು ಒದರಿದಾಗ ವಿರುದ್ಧಪಕ್ಷದವರ ದಿವಾಳಿಯಾಗಿ ಬಿಟ್ಟಿತ್ತು (ಮೂರುದಾ. ೮). [← ಇಂ. Quote]

**ಕೋಟುಗಸ್ತಿ** 'ಕೋಟುಗಸ್ತು' ನೋ.

**ಕೋಟುಗಸ್ತು**, ಕೋಟುಗಸ್ತಿ (ನಾ). ರಾತ್ರಿಯಲ್ಲಿ ವೇಷ ಬದಲಾಯಿಸಿಕೊಂಡು ಗುಟ್ಟಾಗಿ ತಿರುಗಾಡುವುದು; ಗುಪ್ತವಾಗಿ ಸಂಚರಿಸುವುದು; ಪಹರೆ (?): ಅ ಪಟ್ಟಣದ ದೊರೆಯಾದ ವಿರೋಚನನು ರೂಪವನ್ನು ಮರೆಯಿಸಿಕೊಂಡು ಕೋಟುಗಸ್ತಿಗಾಗಿ ಬರುತಾ ಇವನನ್ನು ಕಂಡು – ನೀನು ಯಾರು? . . . ಎಂದನು (ನೀತಿಚಿಂ. V,೩). **ಕೋಟುಗಸ್ತಿ**: ನಿನ್ನೆ ರಾತ್ರಿ ಕಳ್ಳರನ್ನು ಹಿಡಿಯುವುದಕ್ಕೆ ಹೋಗಿದ್ದ ಠಾಣೇದ ಗುರಿಕಾರನು ಊರಲ್ಲಿ ಕೋಟುಗಸ್ತು ತಿರುಗುತ್ತಿರುವಾಗ್ಗೆ (ಪೇಟೀಮಾ. ೩೩). [ಕೋಟು ? + ಗಸ್ತು]

**ಕೋಟುರ** (ನಾ). ನೋವು; ಸಂಕಟ (?): ಪೀಳಾರ ಮನಕ್ಕೆ ಕೋಟುರಮನಾಗಿಸದೀ ಭುವನಾಂತರಾಳದೊಳ್ (ಎಇ. XIII, ೩೦೩–೨೮; 1125). [< ಕೋಟರ ?]

**ಕೋಟೆ$_1$** 'ಕೋಂಟೆ' ನೋ.

**ಕೋಟೆ$_2$** (ನಾ). ಒಂದು ಸೀಮೆಯ ಹೆಸರು: ಕೋಟೆಯ ನೀತಿಮಾರ್ಗ್ಗೇಶ್ವರರಪ್ಪ ಮನಾಳ್ವ ಶ್ರೀಮನ್ನೊವಡಿ ಚಿಲ್ಲುಕದೇವ (ಎಕ. IX, ಚನ್ನಪ. ೪೮–೮; 907). [?]

**ಕೋಟೆಕೋಲಾಹಲ** 'ಕೋಂಟೆಕೋಲಾಹಲ' ನೋ.

**ಕೋಟೆಕೋಳಾಹಳ** 'ಕೋಂಟೆಕೋಲಾಹಲ' ನೋ.

**ಕೋಟೆಗಲ್ಲು** (ನಾ). ಕೋಟೆಯ ಗೋಡೆಯ ಕಲ್ಲು; ಪ್ರಾಕಾರದ ಶಿಲೆ: ಮಂಟಪಂ ಬಿರಿಬಿರಿದು ಬಯಲಾಯ್ತು ಬಾಗಿ ಬಿದ್ದುವು ಕೋಟೆಗಲ್ಲುಗಳ್ (ಬಸವ. ೧೩–೫).
[ಕೋಟೆ$_1$ (< ಕೋಂಟೆ) + ಕಲ್ಲು (< ಕಲ್$_3$)]

**ಕೋಟೆಗಾ** (ಕ್ರಿ). ಕೋಟೆಯನ್ನು ರಕ್ಷಿಸು, —ಕಾಪಾಡು: ಎತ್ತಿದ ಕಂಚುಗಳುರಿವಳಗಿತ್ತಂ ಮಿಸುಗುವಿನಮೆಳ್ವಜಿಳ್ವಜಿನುತ್ತಂ ಬಿತ್ತರದಿನಾರ್ದು ತಿರುಗುತೆ ಸುತ್ತಂ ಸಲೆ ಕೋಟೆಗಾದನ ಕಳಕ ಧೀರಂ (ವೃಷವಿ. ೧೧–೧೨). [ಕೋಟೆ$_1$ (< ಕೋಂಟೆ) + ಕಾ$_1$]

**ಕೋಟೆಗಾಜು** 'ಕೋಂಟೆಗಾಜು' ನೋ.

**ಕೋಟೆಗಾವಲ್** 'ಕೋಂಟೆಗಾವಲ್' ನೋ.

**ಕೋಟೆಗಾಳಗ** 'ಕೋಂಟೆಗಾಳಗ' ನೋ.

**ಕೋಟೆಗಾಳೆಗ** 'ಕೋಂಟೆಗಾಳಗ' ನೋ.

**ಕೋಟೆತೆನೆ** 'ಕೋಟೆದೆನೆ' ನೋ.

**ಕೋಟೆದೆನೆ**, ಕೋಟೆತೆನೆ (ನಾ). ಕೋಟೆಯ ಅಗ್ರಭಾಗದಲ್ಲಿರುವ ಬುಗುರಿಯ ಆಕಾರದ ಕಂಡಿಯುಳ್ಳ ರಚನೆ,—ಶಿಲ್ಪ: ಬಿಡದೆ ಸಾವಿರ ಸಂಖ್ಯೆಯೂ ನಿಚ್ಚಣಿಗೆಯ ತೊಡಿಸಿ ತೆಂಕಣ ಕೋಟೆದೆನೆಗೆ (ಕಂಸವ. ೧೪–೪೧) ಮುಗಿಲುಮುಟ್ಟಿದ ಕೋಟೆದೆನೆಗಳಿಂ ಕೊನೆಗಳಿಂದಗಳು ಜಲಮುತಳಮಂ ಭೇದಿಪುದು (ರುಕ್ಮಾಂಗ. ೩–೪). **ಕೋಟೆತೆನೆ**: ಗಗನವ ಸೋಂಕುವ ಕೋಟೆಕೊತ್ತಲುಗಳು ಬುಗುರಿ ಮಾಟದ ಕೋಟೆತೆನೆಯು (ಸೌಗಂಧ. ೧–೬); (ಕಟ್ಟಡಕ್ಕೆ, ಗೋಡೆಗೆ) ಕಂಡಿಗಳುಳ್ಳ ಕೈಪಿಡಿಗೋಡೆ ಹಾಕು, ಕಟ್ಟು; ಕೋಟೆತೆನೆ ಮಾಡು, ಕಟ್ಟು (Embattle. ಇಂಕನ್ನ). [ಕೋಟೆ$_1$ (< ಕೋಂಟೆ) + ತೆನೆ$_1$]

**ಕೋಟೆಮನೆ** (ನಾ). ಕೋಟೆಯಿಂದ ಸುತ್ತುವರಿಯಲ್ಪಟ್ಟ ಮನೆ: ಹಿಂದೆ ದುರ್ಗವಾಗಿದ್ದ ಶ್ರೀಮಂತಗೃಹ, ಕೋಟೆಮನೆ (Castle. ಇಂಕನ್ನ). [ಕೋಟೆ$_1$ (< ಕೋಂಟೆ) + ಮನೆ]

**ಕೋಟೆಮಾನ್ಯ** (ನಾ). ಕೋಟೆಯ ರಕ್ಷಣೆಗಾಗಿ ಕೊಟ್ಟ ಮಾನ್ಯ, —ಭೂಮಿ: ಬಯಿರಗೊಂಡಗೆ ಕೋಟೆಮಾನ್ಯದ ಗದೆ (ಮೈಆರಿ. ೧೯೩೦, ೯೮–೩; 17ನೆಯ ಶತ). [ಕೋಟೆ$_1$ (< ಕೋಂಟೆ) + ಮಾನ್ಯ]

**ಕೋಟೆಮುಗಿಲು** (ನಾ). ಕೋಟೆಯ ಆಕಾರದಲ್ಲಿ ಸುತ್ತುಗಟ್ಟಿದ ಮೋಡ: ಕೋಟೆಮುಗಿಲು, ಕೆಮ್ಮೋಡ, ಬಿಳಿಮೋಡ, ಕಾರ್ಮೋಡ, ಹಿಂಡುಮೋಡ ಇವಿದ್ದು ಬಿಟ್ಟಿಹುಳ ನೆಲ ಕಚ್ಚದೆ ಹಾರಾಡಿದರೆ ಮಳೆ ತಕ್ಕೋಳಿ, ಕುರ್ಚೀಟು ಬಂತು (ಹುಟ್ಟಿಹ. ೧೪೩).
[ಕೋಟೆ$_1$ (< ಕೋಂಟೆ) + ಮುಗಿಲು (< ಮುಗಿಲ್)]

**ಕೋಟೆಯಮ್ಮ** (ನಾ). ಒಬ್ಬಾತನ ಹೆಸರು: ಉತ್ತರಾಯಣ ಸಂಕ್ರಾನ್ತಿಯನ್ನು ಕೋಟಿಗರ ಕೋಟೆಯಮ್ಮಂ ಗೋಸಹಸ್ರಮಾಳ್ದಂ (ಮೈಆರಿ. ೧೯೨೯, ೭೮–೧೨; 964).
[ಕೋಟೆ$_1$ (< ಕೋಂಟೆ) + ಅಮ್ಮ$_1$]

**ಕೋಟೆವೞಿ** (ನಾ). ಕೋಟೆಯ ಹತ್ತಿರದ ನೆಲ; ದುರ್ಗದ ಪ್ರದೇಶ: ಜೆಟ್ಟಿಗರ ವೀರರಸಮಂ ನೆಟ್ಟನೆ ತೂಗಲ್ಕೆ ದಿಟ್ಟಿದೊಲೆಯಿಂದದಟರ್ ಕಟ್ಟಿದ ಕಟ್ಟಳೆಯೆನಿಸಿದುದಿಟ್ಟಳಮೆನೆ ಕೋಟೆವೞಿಯ ಸೆಜ್ಜೆಗೆಯ್ದಾಣಂಗಳ್ (ಪಾರ್ಶ್ವಪು. ೩-೧೩೨). [ಕೋಟೆ$_1$ (< ಕೋಂಟೆ) + ಬೞಿ$_2$]

**ಕೋಟೆವಿರಿ** (ನಾ). ಕೋಟೆಯ ಬಿರುಕು, —ಸೀಳು: ನಾಡ ಕೊಳ್ಳೆಗೆ ಹಂದು ತಲೆ ಹೋಗಾಡಿದಂತವನಲ್ಲ ಮೇಹಂಗಾಡ ಬಂದಿಲಿ ಕೋಟೆವಿರಿ [ಪಾಠಾಂ. ಕೋಟಡಿಜ್ಜಿ]ಯಲಿ ಸಿಕ್ಕಿ ಮಡಿವಂತೆ (ಬಸವು. ೫೮-೪೪). [ಕೋಟೆ$_1$(< ಕೋಂಟೆ) + ಬಿರ್$_2$]

**ಕೋಟೇಶ್ವರ** (ನಾ). (ಕರಾ) ೧. ಒಂದು ಊರಿನ ಹೆಸರು. ೨. ಬ್ರಾಹ್ಮಣರ ಒಂದು ಪಂಗಡ; ಆ ಪಂಗಡಕ್ಕೆ ಸೇರಿದವನು: ಕೋಟೇಶ್ವರ ಬ್ರಾಹ್ಮಣರು, ಕುಂದಾಪುರ ತಾಲ್ಲೂಕಿನ ಕೋಟೇಶ್ವರವೆಂಬ ಗ್ರಾಮದಲ್ಲಿ ವಾಸಿಸುವರು (ತುಳುನಾ. ೧೪೫). [ಕೋಟೆ+ ಈಶ್ವರ]

**ಕೋಟ್ಟೆ** 'ಕೋಂಟೆ' ನೋ.

**ಕೋಟ್ವಳೆ** 'ಕೊತವಾಲ' ನೋ.

**ಕೋಟ್ವಾರಿ** 'ಕೊಟ್ವಾರಿ' ನೋ.

**ಕೋಟ್ಟೆ** 'ಕೋಂಟೆ' ನೋ.

**ಕೋಟ್ಟೆಜ** (ನಾ). ಒಬ್ಬಾತನ ಹೆಸರು: ಕೋಟ್ಟಮುಂ ಮನೆತ್ತಾನಮುಂ ಚನ್ದ್ರಸೇನಾಚಾರ್ಯರ್ಗೆ ಉದಪೂರ್ವಂ ಕೊಟ್ಟಾರ್ ಅದರ್ಕೆ ಸಾಕ್ಷಿ ಕೋಟ್ಟೆಜರುಂ ಕಾರೆಅಜುಕುಂ (ಮೈಆರಿ. ೧೯೨೫, ೧೦೩-೩೬ ; ?). [?]

**ಕೋಟ್ಯಂತರ** (ಗು). ಕೋಟಿಗಟ್ಟಲೆಯ; ಲೆಕ್ಕವಿಲ್ಲದ; ಅಸಂಖ್ಯವಾದ: ಹಿಡಿಮಂದಿಯ ಭೋಗ ವೈಭವಗಳ ರಕ್ಷಣೆಗಾಗಿ ಕೋಟ್ಯಂತರ ಜನರ ರಕ್ತಶೋಷಣೆ ಮುಃಖಸಂಕಟಗಳನ್ನು ಜಾಗರೂಕತೆಯಿಂದ ಬಚ್ಚಿಡುತ್ತಿದ್ದ (ಪುನರು. ೩೨೬). [ಕೋಟೆ$_1$ + ಅಂತರ]

**ಕೋಠ** 'ಕೊಟ್ಟ$_8$' ನೋ.

**ಕೋಠಾರ** 'ಕೊಟ್ಟಾರ$_1$' ನೋ.

**ಕೋಠಿ$_1$** (ನಾ). ಪ್ರಶ್ನೆ; ಸವಾಲು: ಗಾನರಸಕ್ಕೆ ಮಾತ್ರವೇ ಈ ಸಂಬಂಧವನ್ನು ಹೇಳುವುದಕ್ಕೆ ಕಾರಣವೇನು? ಎಂದು ಕೋಠಿಮಾಡಿದರೆ, ಉತ್ತರವನ್ನು ಚೆನ್ನಾಗಿ ಯೋಚಿಸಿ ತಿಳಿದುಕೊಳ್ಳಬೇಕಾಗಿದೆ (ಕಾಂಪೂಹ. ೧೨); ಆದರ ಮೇಲೆ ನೀನು ಇನ್ನಾವ ಕೋಠಿ ಹಾಕುತ್ತೀಯೆ? ಎಂದು ಕೇಳಿದನು (ಕೊನಷ್ಟ್ಕ. ೧೨೨); ದರ್ಭೆಗೇನು ನಮ್ಮ ಮನೆಯಲ್ಲಿ ಬರ ಬಂದಿದೆಯೇನೆ? ಒಂದು ಹಸು ಮೇಯುವಷ್ಟು ಇದೆಯಲ್ಲಾ ... ಎಂದು ವೆಂಕಮ್ಮ ಅದಕ್ಕೂ ಒಂದು ಕೋಠಿಹಾಕಿ ಮಾತಿಗೆ ಮಾತು ಜೋಡಿಸುತ್ತಿದ್ದರು (ರಾಗಿಣಿ. ೩). [< ಸಂ. ಕೋಟಿ]

**ಕೋಠಿ$_2$** 'ಕೋಟ್ಟೆ$_2$' ನೋ.

**ಕೋಠೀಖೋಲಿ** 'ಕೋಟೆಖೋಲಿ' ನೋ.

**ಕೋಡ$_1$** 'ಕೋಡಗ' ನೋ.

**ಕೋಡ$_2$** (ನಾ). ಕಾಡುಹಂದಿ; ಸೂಕರ: "ಮಿಗೆಯೊಕ್ಕಲ ಕೋಡ" (ಕವಿಕಂ. ೬೧); ಕೊ[ಕೋ]ಡ ಕೊರಂಗಿ ಮರಿ ಹುಲ್ಲೆ (ಶ್ರೀಪಾಲ. ೭-೧೬). [< ಸಂ. ಕ್ರೋಡ]

**ಕೋಡ$_3$**(ನಾ). ಕೊಂಕು; ಬಾಗು; ವಕ್ರ. 'ಕೋಡಮೆ' ಪರಾ. [?]

**ಕೋಡಂಗಿ, ಕೋಡಗಿ, ಕೋಡಿಂಗ, ಕೋಡಿಗ** (ನಾ). ೧. ಯಕ್ಷಗಾನ, ಬಯಲಾಟ, ನಾಟಕ ಮತ್ತು ಸರ್ಕಸ್ಸುಗಳಲ್ಲಿ ವಿಕೃತ ವೇಷವನ್ನು ಧರಿಸಿ ಅಭಿನಯಿಸುವ ಹಾಸ್ಯಪಾತ್ರ; ವಿದೂಷಕ; ಹಾಸ್ಯಗಾರ; ನಕಲಿ: ಹಳೆಯವನು ಬಿದ್ದ ಹೊಸಹೊಸಬ ಗೆದ್ದ, ಕೋಡಂಗಿ ನಡುವೆ ಎದ್ದ. ನವೋಸವದ ಬಯಲಾಟ ಭಾರಿ ತಾಂಡವವೆರಾಪ್ಪುದುದ್ದ (ಅರಳು. ೪೨೬); ಕೋಡಂಗಿ ಆಗಲೇ ತೆರೆಯಾಚೆ ಬಂದನಯ್ಯ (ಚಂಡಿಮ. ೨೨-೪); ದೇವರಿಗೆತ್ತಿದ ಆರತಿಯೊಂದಿಗೇನೆ ಕೋಡಂಗಿಯರು ಭಾಗವತರೊಡನೆ ಸ್ತುತಿಪಾಠ ಮಾಡುತ್ತ ರಂಗಸ್ಥಳವನ್ನು ಸೇರಬೇಕು (ಯಕ್ಷಬ. ೯೧); ಸರ್ಕಸ್ಸಿನಲ್ಲಿ ಅಂಗಚಲನೆಯ ಚಮತ್ಕಾರ ಸಾಮರ್ಥ್ಯವನ್ನು ತೋರುವ ಕಲಾವಿದನನ್ನು ಅನುಕರಿಸಿ ಮೂರು ಉರುಳಾಗುವ ಕೋಡಂಗಿಯಂತೆ (ಬಂಕಿಮ. ೬೫೦). ೨. ಅವಿವೇಕಿ; ಮೂರ್ಖ: ಕೊಟ್ಟೋನು ಕೋಡಂಗಿ ಇಸ್ಕೊಂಡೋನು ಈರಭದ್ರ (ಗಾದೆ). ೩. ಕುರೂಪಿ: ಈ ಕೋಡಂಗಿಯನ್ನು ಎಲ್ಲಿಂದ ಹುಡುಕಿ ತಂದರೋ ... ಚಂದ್ರಭಾಗಿಗೆ ತೋಛಿಸುವ ಹುಡುಗನೇ ಅಲ್ಲ (ಮೂರುದಾ. ೬೫).

**ಕೋಡಗಿ**: ೧. ಆ ಕೋಡಗಿ ಕಾಡ ಕೂಡಿ ಕುರವಿಯಾಗಿರ್ದುದು (ಪುಣ್ಯಾಸ್ರ. ೪-೫೩ ವ). **ಕೋಡಿಂಗ**: ೨. 'ಕೊಟ್ಟವನು ಕೋಡಿಂಗ, ತೆಗೆದುಕೊಂಡವನು ವೀರಭದ್ರ' ಎಂಬ ಗಾದೆಯಂತೆ (ಕಾಸೂಕು. ೯೧೨).

**ಕೋಡಿಗ**: ೧. ಬೊಂಬೆಗಳಾಟಗಳಲ್ಲಲ್ಲಿ ಪಾತ್ರನಿಕಂಬಿನಿಜನಗಳಲ್ಲಲ್ಲಿ ಡೊಂಬರಗಳೆಯ ಸಂಗಡಿಗರು ಕೋಡಿಗರಿಂಬುಗೊಂಡಿರ್ದರಲ್ಲಲ್ಲಿ (ಧರಣ.೨೦-೬೫). ೨. ಪುಸ್ತಕವ ಹಿಡಿದುಕೊಂಡು ಪುರಜನವ ಮೆಚ್ಚಿಸುವ ಕೋಡಿಗರಂತೆ (ಭನವ. ೩೪-೭); ರಾಮನಾಥಾರ್ಯಗಳ್ಕಾಳ್ಕೆ ಕೋಡಿಗರ ವಿದ್ಯೆಯಂ ಜೋಡಿಸಿದನೆನಲ್ (ಎಕೋಪು. ೯-೩೩); ಗೊಲ್ಲರ ಗೊರವರ ಗೋಪತಿಗಳ ಬಲುಮಲ್ಲರ ಮಾಸಾಳುಗಳ ಕೊಲ್ಲಟಿಗರ ಕೋಡಿಗರ ಕೇರಿಗಳು ಲೆಕ್ಕವಿಲ್ಲದೆಸೆವವದಚಿಯೊಳಗೆ (ರಾಮವಿ. ೩-೪೧); ಕೋಡಿಗನೋ ಏಡಾಯಗನೋ ಕೋವಿದ ಮುಗ್ಧರದೇವನೊ (ಹಮ್ಮೀರ. ೬-೫೦).

**ಕೋಡಂಗಿಯಾಟ** = ಹಾಸ್ಯಗಾರನ ಅಭಿನಯ; ಕೋತಿಯಾಟ; ವಕ್ರಚೇಷ್ಟೆ: ಕೋಡಂಗಿಯಾಟವನಾಡಿದ ಭಕ್ತಂಗೆ ಬೇಡಿತ್ತನೀವ ನಮ್ಮ ಕೂಡಲಸಂಗಮದೇವ (ಬಸವ. ೧೭೯).

[ದೇ. ॥ ತಮಿ. ಕೋಣಙ್ಗಿ; ಮಲ. ಕೋಡಙ್ಗಿ; ತುಳು. ಕೊಡಂಗ್ಯೆ; ತೆಲು. ಕೋಣಂಗಿ, ಕೋಡಿಗ]

**ಕೋಡಂಗಿತನ** (ನಾ). ನಕಲಿ; ಕಪಿಚೇಷ್ಟೆ; ಹಾಸ್ಯ: (೬). [ಕೋಡಂಗಿ + -ತನ]

**ಕೋಡಂಗುರಿ** (ನಾ).(?): ಮರಿ ಹಂದಿ ಹುಲ್ಲೆ ಹುಲಿ ಕಡವೆರಲೆಯುಮಾ ಬೆಕ್ಕು ತೋಳನೆಯ್ ಸಾರಂಗಂ ಕರಡಿ ಮೊಲಂ ಕೋಡಂಗುರಿ ನರಿ ದರಿ ಕೊರಂಗಿ ಬೆಕ್ಕು ಹೇರುಡು ಕಾಕಂ (ಸೂಕ್ತಿಸು. ೩-೧೪೯). ℙ. ಇದು ಕೊಂಡಗುಜಿ ಎಂಬುದರ ಅಪಲಿಖಿತವಿರಬಹುದು.

**ಕೋಡಂಬವಳಿ** (ನಾ). ಒಂದು ಊರಿನ ಹೆಸರು (?): ಅತ್ರ ಸಿರಿಸಿ ದಯನ ಬರಹ ಯುಕ್ಕೆ ನಿಂಮ ಕೋಡಂಬವಳಿಯಿಂದ ಪೊಕ್ಕಲು ಬಂದು (ಎಕ. XIV, ಮಳವ. ೧೪೫-೪೯; ?). [?]

**ಕೋಡಂಬೆ** (ನಾ). (?): ಪಡಹದ ಪಿಳುಕುಟಿಯ ಕೊಳಂಬೆಯ ಕೂಳಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ವೆರ್ಚಿ . . ಕೊಟಕಿಟ್ಟಾಡುವ ಮೃಗಂಗಳೊಳ್ (ಅನಂತಪು. ೧೧-೩೯ ವ). [?]

**ಕೋಡಕಯ್** 'ಕೋಡಕೆಯ್' ನೋ.

**ಕೋಡಕೆಯ್, ಕೊಡಕ್ಯೆ, ಕೋಡಕಯ್, ಕೋಡಕ್ಯೆ,** (ನಾ). ಒಂದು ಬಗೆಯ ಆಯುಧ (?): ಅಳವನಜ್ಜಿಯದೆ ಕೆಣಕಿ ತಹ ಮುಂಕೊಳಿಸಿ ಕದನವ ಕೋಡಕೆಯ್ಯ[ಪಾಠಾಂ. ಕೈಯ] ವರಳವಿ ಗೊಟ್ಟರೆ ನೋಡಿ ಸಿಡಿಮಿಡಿಗೊಂಡು (ಕುವ್ಯಾಭೀ. ೪-೬೫). **ಕೊಡಕ್ಯೆ**: ಕೊಂದನು ಕೊಡಕ್ಯೆಯೊಳು ಬಂದೆಸುವ ಬಿಲ್ಲ ಮಂದಿಯ ಮುಂದೆ ಸಂದಣಿಸಿ (ಕುರಾಸಾಂ. ೪೪-೧೨೦).

